Photo by P. K. Patel



ಬಹುಮಾನ
ಪಡೆದ ಶೀರ್ಷಿಕೆ

ನೀರೇ ಮುಗಿಯದು

ಕಳಿಸಿದವರು:
ಯಂ. ಸುವರ್ಣಮ್ಮ, ಮೈಸೂರು

# ಈ ಸಂಚಿಕೆಯಲ್ಲಿ

# ಫೆಬ್ರವರಿ ತಿಂಗಳಲ್ಲಿ ಪ್ರದರ್ಶನಾರಂಭ

## ಕನ್ನಡ ಚಿತ್ರಪ್ರಪಂಚದಲ್ಲಿ ಏಕೈಕ ಹಾಸ್ಯಭರಿತ ಕಲಾಕೃತಿ !!!




ಭೂಮಿಕೆ: ಕಲ್ಯಾಣ್ ಕುಮಾರ್, ರಾಮಚಂದ್ರ ಶಾಸ್ತ್ರಿ, ಶಾಂತಿಗ್ರಾವರ್,
ಮರಿರಾವ್, ಗಣಪತಿ ಭಟ್, ವಿದ್ಯಾ, ಸಂಧ್ಯಾ, ಜೈಶ್ರೀ

| ಸಂಭಾಷಣೆ—ಹಾಡುಗಳು | ಕಥೆ | ಮ್ಯೂಜಿಕ್ |
|---|---|---|
| ನಾಡಿಗೇರ್ ಕೃಷ್ಣರಾವ್ | ಸಿ. ವಿ. ರಾಜು, ಮತ್ತು ಪಿ. ಎ. ಕುಮಾರ್ | ಕಾಳಿಂಗರಾವ್ |

## ಬೆಂಗಳೂರು: ವಿಜಯಲಕ್ಷ್ಮಿ—ಮಿನರ್ವ

ವುಡ್‌ಲ್ಯಾಂಡ್ಸ್: ಮೈಸೂರು; ನ್ಯೂ ಚಿತ್ರಾ: ಮಂಗಳೂರು; ಶಂಕರ್ ಟಾಕೀಸ್: ಚಿತ್ರದುರ್ಗ;
ಕೃಷ್ಣಾ: ತುಮಕೂರು; ಶಾಂತಿಪಿಕ್ಚರ್ ಹೌಸ್: ದಾವಣಗೆರೆ; ವಿನಾಯಕ: ಶಿವಮೊಗ್ಗ;
ಜ್ಯೋತಿ ಸೆಂಟ್ರಲ್: ಚಿಕ್ಕ ಮಗಳೂರು

**A PRAKASH RELEASE**

# ಪ್ರಸಾದ್ ಪ್ರಾಸೆಸ್

ನವೀನ ಪರಿಕರಗಳಿಂದ, ಅನುಭವಜ್ಞರಾದ ಕೆಲಸಗಾರರಿಂದ, ಲೈನು, ಹಾಫ್‌ಟೋನ್, ಮಿಶ್ರಮು, ಕಲರ್ ಬ್ಲಾಕುಗಳು, ಎಲ್ಲಾ ವಿಧವಾದ ಅಚ್ಚು ಕೆಲಸಗಳಿಗೆ ಅನುಕೂಲಿಸುವಂತೆ ಉತ್ತಮವಾಗಿ ತಯಾರುಮಾಡಿ ತಮಗೆ ಸಕಾಲದಲ್ಲಿ ಒದಗಿಸ ಬಲ್ಲೆವು.

'ಚಂದಮಾಮ' 'ಕಿನಿಮಾ'ದೊಳಗಿನ ಬ್ಲಾಕುಗಳು, ಕವರು ಪುಟದ ಕಲರ್ ಬ್ಲಾಕುಗಳು, ಒಳಗಿನ ಪ್ರಕಟನೆಯ ಬ್ಲಾಕುಗಳೊಂದಿಗೆ ಸಹಾ ಎಲ್ಲಾ ನಮ್ಮ ತಯಾರಿಕೆಯಾಗಿವೆ.

—: ವಿವರಗಳಿಗೆ ಈ ಕೆಳಗಿನ ವಿಳಾಸಕ್ಕೆ ಬರೆಯಿರಿ :—

**ಪ್ರಸಾದ್ ಪ್ರಾಸೆಸ್**

**2 & 3 ಆರ್ಕಾಟ್ ರೋಡ್, ವಡಪಳನಿ, ಮದ್ರಾಸು–26**

# ಶಾರದ ಇಂಕ್

ರಿಜಿಷ್ಟರ್ಡ್

ಫೌಂಟೆನ್ ಪೆನ್ನುಗಳಿಗೆ ಉತ್ತಮವಾದ ಮಸಿ




ಕೆ. ವಿ. ಅಂಡ್ ಸನ್ಸ್,
ಬಳ್ಳಾರಿ.

# ಬಾಯೋಟೋನಾ



ಇದರ ಸೇವನೆಯಿಂದ ಚಿಕ್ಕಬಾಲಕರ ಜೀವಾಣುಗಳಿಗೂ ಮಜ್ಜಾತಂತುಗಳಿಗೂ ಪುಷ್ಟಿಯನ್ನು ಕೊಟ್ಟು ಹಲ್ಲುಬರುವ ಸಮಯ ಸಂಭವಿಸುವ ತ್ರಾಸವಾಗಲಾರದು. ಪುರುಷರು ಸ್ತ್ರೀಯರು ಸಹಾ ಇದನ್ನು ಸೇವಿಸಲು ಶಕ್ತಿವ ಪುಷ್ಟಿಯು ಲಾಭವಾಗುವದು. ಸೂಚೀಪತ್ರ ಪಡಕೊಳ್ಳಿರಿ.

**Roy & Company**
Princess Street, Bombay—2.

ಮನೋಹರ ಪರಿಮಳಕ್ಕೆ . . .

# ಮೈಸೂರು ಬಾತ್ ಟ್ಯಾಬ್ಲೆಟ್‌ಗಳು

ಆಹ್ಲಾದಕರವಾದ ಮಲ್ಲಿಗೆ ಹೂವಿನ ಸುವಾಸನೆಯಿಂದ ಕೂಡಿದ್ದು

ಸುಪ್ರಸಿದ್ಧ **ಮೈಸೂರು ಸ್ಯಾಂಡಲ್ ಸೋಪ್** ತಯಾರಿಸುವವರ ತಯಾರಿಕೆ

ಎಲ್ಲೆಲ್ಲೂ ದೊರಕುವುದು

## ಗವರ್ನ್‌ಮೆಂಟ್ ಸೋಪ್ ಫ್ಯಾಕ್ಟರಿ,

**ಬೆಂಗಳೂರು**

(ಮೆಂಬರ್ ಐ. ಎಸ್. ಟಿ. ಎಮ್. ಎ)

ಅದು ಮಧುರವಾದದ್ದು...

ಎಲ್ಲಾ ಕಾಲಗಳಿಗೂ ಒಳ್ಳೆಯ ರುಚಿಕರವಾದ ಬಿಸ್ಕಟ್ಟುಗಳು. ಹಾಲಿನಿಂದ ಮತ್ತು ಗ್ಲೂಕೋಸಿನಿಂದ ತಯಾರಾಗಿ ಬೆಲೆಯುಳ್ಳ ವಿಟಮಿನ್ನುಗಳಿಂದ ತುಂಬಿವೆ.




ಜೆ. ಬಿ. ಮಂಘಾರಾಮ್ & ಕೋ., ಗ್ವಾಲಿಯರ್

ಬೊಂಬಾಯಿ ಏಜೆಂಟರು :

ನೇಷನಲ್ ಫುಡ್ ಏಜನ್ಸೀಸ್, 315, ನ್ಯೂ ಚರ್ನೀ ರೋಡ್




**ನರಿಷಿಂಗ್ ಬಿಸ್ಕಟ್ಟುಗಳು**

## ಸೂಚನೆ

ಬರುವ ತಿಂಗಳ 'ಚಂದಮಾಮ' ಸಂಚಿಕೆಗಳನ್ನು ಈ ತಿಂಗಳ ಕಡೇ ವಾರದಲ್ಲೇ ಪೋಸ್ಟ್ ಮಾಡಲಾಗುತ್ತದೆ. ಆ ಸಂಚಿಕೆಗಳು ತಕ್ಕ ಕಾಲದಲ್ಲಿ ನಿಮಗೆ ಸೇರದಿದ್ದರೆ, ನಿಮ್ಮೂರ ಪೋಸ್ಟಾಫೀಸಿನಲ್ಲಿ ನೀವು ಕಂಪ್ಲೇಂಟು ಕೊಟ್ಟು, ಆ ಸಂಗತಿ ನಮಗೂ ತಿಳಿಸಬೇಕಾಗಿ ಕೋರಲಾಗಿದೆ.

ಚಂದಮಾಮ ಪಬ್ಲಿಕೇಷನ್ಸ್,
ವಡಪಳನಿ.... ಮದ್ರಾಸ್–26.

# ಚಂದಮಾಮ

ಸಂಚಾಲಕರು : 'ಚಕ್ರಪಾಣಿ'

**ಈ** ಸಂಚಿಕೆಯಲ್ಲಿ ನಾವು ಕೊಟ್ಟ ಇನ್ನೊಂದು ಶೀರ್ಷಿಕೆ—ಕಿರು ಬರೆಹದ ಮೇಲಾಟ—ನಿಮಗೆ ತುಂಬಾ ಕುತೂಹಲವಾಗಿದ್ದೀತಲ್ಲವೆ? ಈ ಬಾರಿ 'ಶಾಲೆಯಲ್ಲಿ ನನ್ನ ತಂಟೆ' ಎಂಬ ವಿಷಯವನ್ನು ಕೊಟ್ಟಿದ್ದೇವೆ. ಇದರ ವಿವರಗಳನ್ನು ಆ ಪುಟದಲ್ಲಿ ನೋಡಿರಿ. ನೋಡೋಣ ನೀವೆಷ್ಟುಮಂದಿ ಹೇಗೆ ಹೇಗೆ ಬರೆದು ಕಳಿಸುತ್ತೀರೆಂದು. ಇದರಲ್ಲಿಯ ನಿಮ್ಮ ಉಲ್ಲಾಸ ಉದ್ಯಮಗಳನ್ನು ನೋಡಿಕೊಂಡು ಮುಂದೆ ಇನ್ನೂ ಬೇರೆ ಬೇರೆ ವಿಷಯಗಳನ್ನು ಕೊಡಬೇಕೆಂದಿದ್ದೇವೆ. ಜನವರಿ ಸಂಚಿಕೆ ನಿಮಗೆಲ್ಲಾ ಬಹಳ ಸಂತೋಷವನ್ನುಂಟು ಮಾಡಿರುವುದೆಂದು ನೂರಾರು ಪತ್ರಗಳು ಬಂದಿವೆ. ಅವುಗಳಲ್ಲಿ ಕತೆಗಳ ವೈವಿಧ್ಯತೆಗಾಗಿ ತಮ್ಮ ತೃಪ್ತಿಯನ್ನು ವ್ಯಕ್ತಪಡಿಸಿದ್ದಾರೆ ಹಲವರು. ಒಳ್ಳೆಯದು. ನಿಮ್ಮ ಸಂತೋಷವೇ ನಮ್ಮ ಸಂತೋಷ.

ಸಂಪುಟ ೧೨ : ಫೆಬ್ರವರಿ ೧೯೫೮ : ಸಂಚಿಕೆ ೨



SANKAR




# ವರ ಮಹಿಮೆ

ನರರಿಗೆ ಸುಖವೂ ಶಾಂತಿಯು ನೀವ
ವರಮಹಿಮೆಗಳಲಿ ಯಾರು ಹೆಚ್ಚೆನುತ
ಆದಿ ಲಕ್ಷ್ಮಿಗೂ ಶ್ರೀ ಸರಸ್ವತಿಗು
ವಾದವು ಬಂದಿತು ಒಂದುದಿನ.

ಆಗಳೆ ಶ್ರೀ ಸತಿ ಭುವಿಯಲವತರಿಸಿ
ಮಂಗಳಾಂಗಿ ಮುತ್ತೈದೆಯಾಗೆಸೆದು
ಹುಡುಕಿ ನೋಡಿ ಬಲು ಬಡದಂಪತಿಗಳ
ಗುಡಿಸಲ ಮುಂಗಡೆ ಬಂದು ನಿಂದಳು.

ಸಿರಿದೇವಿಯ ಸಿರಿಕಾಂತಿಯ ನೋಡಿ
ಹರುಷವ ಪಟ್ಟರು ಮನೆಯವರೆಲ್ಲ
" ಬಂದ ಕಾರ್ಯವೇನಮ್ಮಾ ಹೇಳು "
ಎಂದು ಕೇಳ್ದನಾ ಮನೆಯೊಡೆಯ

" ವರ ಕೊಡಲೆಂದೇ ಬಂದ ಲಕ್ಷ್ಮಿ ನಾ;
ಕರುಣಿಸುವೆನು ಕೇಳ್ ಮೂರುವರಂಗಳ"
ಎಂದಾ ಇಂದಿರೆ ಪೇಳಲು, ಅತ್ಯಾ
ನಂದವ ಹೊಂದಿದರಾ ದಂಪತಿಗಳು.

" ಅನಂತ ಧನವನು ಈಗ ಕೊಡಮ್ಮಾ;
ಅನಂತರೆರಡನು ಕೇಳುವೆವಮ್ಮ "
ಎಂದವೊಡನೆಯೇ ಲಕ್ಷ್ಮಿ " ತಥಾಸ್ತು "
ಎಂದು ಹೇಳಿ ತಾ ಮಾಯವಾದಳು.

“ ಮಾರಂಗ ”

ಅಡಿಗೆ ಕೋಣೆಯಲಿ ಊಟದ ಮನೆಯಲಿ
ಮಲಗುವಲ್ಲಿಯೂ ಚಾವಡಿಯಲಿಯೂ
ಹಣವ ಕಾಯುತಾ ದಂಪತಿಗಳಿಗೆ
ನಿದ್ರಾಹಾರಗಳಿಲ್ಲದೆ ಹೋಯ್ತು.

ಯಾರೋ ಬಂದರು ಸಾಲಕ್ಕಾಗಿ,
ಕಳ್ಳರು ಬಂದರು ಕೊಳ್ಳೆಗಾಗಿ,
ರಾಜರಾಳುಗಳು ತೆರಿಗೆಗೆ ಬಂದರು,
ದಂಪತಿಗಳು ಬೇಸತ್ತು ಹೋದರು.

ಸುಖವಿಲ್ಲದ ವಿಶ್ರಾಂತಿಯು ಕೊಡದ
ಧನವೇಕೆಂದು ಲಕ್ಷ್ಮಿಯ ಕರೆದು
“ ಎರಡನೆ ವರವಾಗೀ ಧನವೆಲ್ಲ
ಮಾಯ ಮಾಡೆ”ಂದು ಬೇಡಿಕೊಂಡರು.

ಲಕ್ಷ್ಮಿ “ ತಾಥಾಸ್ತು” ಎನಿಸಿದಳದನೂ ;
ಮೂರನೆ ವರವನ್ನಿಂತು ಕೇಳಿದರು :
“ ಇದ್ದುದರಲೆ ಸಂತೃಪ್ತಿ ಬಡುವುದೇ
ಸುಖವೆಂಬರಿವೆಮಗಿರಲಿ ” ಎಂದರು.

“ ಅದು ಕೊಡುವವಳಾನಲ್ಲ” ವೆಂದು ಸಿರಿ,
ಗರ್ವ ಬಿಟ್ಟು ಶಾರದೆಯನು ಕರೆದು
ಮೂರನೆಯ ವರವ ಕೊಡಿಸಿದಳವರಿಗೆ
ವಿವೇಕ-ವರಮಹಿಮೆಗೆ ಎಣೆಯಿದೆಯೆ?





# ಮುಖಚಿತ್ರ

ಅರ್ಜುನನು ತೀರ್ಥಯಾತ್ರೆ ಮಾಡುತ್ತಾ ನಾನಾದೇಶಗಳನ್ನು ಸಂಚರಿಸಿಕೊಂಡು ದ್ವಾರಕೆಯ ಬಳಿಗೆ ಬಂದನು. ಸರ್ವಜ್ಞನಾದ ಕೃಷ್ಣನೂ ಊರ ಹೊರಗೆ ಅರ್ಜುನನಿಗೆ ಭೇಟಿಯಾದನು.

ಕೃಷ್ಣನ ತಂಗಿ ಸುಭದ್ರೆ ವಿವಾಹ ಯೋಗ್ಯಳಾಗಿದ್ದಳು. ಅರ್ಜುನನೇ ಅವಳಿಗೆ ತಕ್ಕ ಪತಿಯೆಂದು ಕೃಷ್ಣನು ಭಾವಿಸಿದ್ದ. ಆದರೆ ಅವನ ಅಣ್ಣ ಬಲರಾಮನಿಗೆ ಇದು ಇಷ್ಟವಿರಲಿಲ್ಲ. ಆದುದರಿಂದ ಕೃಷ್ಣಾರ್ಜುನರು ಸೇರಿ ಒಂದು ತಂತ್ರ ಹೂಡಿದರು:

ಅರ್ಜುನನು ಸನ್ಯಾಸೀ ವೇಷದಿಂದ ದ್ವಾರಕೆಯ ಬಳಿಯ ರೈವತಕಾದ್ರಿಯಲ್ಲಿ ತಳವೂರಿದ. ಅವನ ಕೀರ್ತಿ ಊರೆಲ್ಲಾ ಹಬ್ಬಿ ಬಲರಾಮನ ಕಿವಿಗೂ ಮುಟ್ಟಿತು. ಬಲರಾಮನು ಸಪರಿವಾರನಾಗಿ ಬಂದು, ಅರ್ಜುನ ಸನ್ಯಾಸಿಯನ್ನು ನಗರಕ್ಕೆ ಕರೆದೊಯ್ದು ಅರಮನೆಯ ಉದ್ಯಾನವನದಲ್ಲಿ ಅವನನ್ನು ಇರಿಸಿದನು. ಸನ್ಯಾಸಿ ಆಗ ಚಾತುರ್ಮಾಸ್ಯವ್ರತ ಹಿಡಿದಿದ್ದ. ಬಲರಾಮನು ಅವನ ಸೇವೆಗೆ ತಂಗಿ ಸುಭದ್ರೆಯನ್ನೇ ನಿಯಮಿಸಿದ. ಕೃಷ್ಣನು ಬೇಡವೆಂದು ತಡೆದರೂ ಬಲರಾಮನಿಗೆ ಆ ಸನ್ಯಾಸಿಯ ಮೇಲೆ ಅಪನಂಬುಗೆಯುಂಟಾಗಲಿಲ್ಲ.

ಸುಭದ್ರೆಗೂ, ಅರ್ಜುನನಿಗೂ ಗುರುತು ಪರಿಚಯ ದಿನೇ ದಿನೇ ಅಭಿವೃದ್ಧಿಯಾಯಿತು. ಅವಳು ಅರ್ಜುನನನ್ನು ತುಂಬಾ ಮೆಚ್ಚಿರುವುದೂ ತಿಳಿದುಬಂತು. ಆಗ ತಾನೇ ಅರ್ಜುನನೆಂದು ಸನ್ಯಾಸಿ ಸತ್ಯ ಹೇಳಿದ. ಸುಭದ್ರೆಗೆ ಬಹಳ ಸಂತೋಷವಾಯಿತು. ಕೃಷ್ಣನೊಂದಿಗೆ ಗುಟ್ಟಾಗಿ ಆಲೋಚನೆ ಮಾಡಿಕೊಂಡು ಕ್ಷತ್ರಿಯರಿಗೆ ಉಚಿತವಾದ ರೀತಿಯಲ್ಲಿ ವಿವಾಹವಾಗುವುದೆಂದು ತೀರ್ಮಾನಿಸಲ್ಪಟ್ಟರು.

ಅಂತೆಯೇ ಗೊತ್ತುಮಾಡಿದ ಒಂದುದಿನ ಸುಭದ್ರೆಯನ್ನು ರಥದಮೇಲೆ ಕುಳ್ಳಿರಿಸಿಕೊಂಡು ಅರ್ಜುನನು ಇಂದ್ರಪ್ರಸ್ಥದ ಕಡೆಗೆ ಹೋಗಲಾರಂಭಿಸಿದನು. ಕುಪಿತನಾದ ಬಲರಾಮನು ತನ್ನ ಸೇನೆಯೊಂದಿಗೆ ತಡೆದರೂ ವ್ಯರ್ಥವಾಯಿತು. ಕಡೆಗೆ ಕೃಷ್ಣನು ಇದರಲ್ಲೇನೂ ಅನ್ಯಾಯವಿಲ್ಲ, ಸುಭದ್ರೆಗೆ ಅರ್ಜುನನೇ ತಕ್ಕಪತಿ ಎಂದು ವಿವರಿಸಿದಾಗ ಅವನು ಸಂತೋಷದಿಂದ ಒಪ್ಪಿಕೊಳ್ಳಬೇಕಾಯಿತು.

ಹೀಗೆ ಕೃಷ್ಣನ ಸಹಾಯದಿಂದ ಅರ್ಜುನನ ತೀರ್ಥಯಾತ್ರೆ ಮುಗಿಯುತ್ತಾ ಅವನಿಗೆ ಸುಭದ್ರಾ ಕಲ್ಯಾಣವಾಯಿತು. ಅವನು ಸುಭದ್ರೆಯೊಂದಿಗೆ ಇಂದ್ರಪ್ರಸ್ಥವನ್ನು ಸೇರಿ ಅಣ್ಣಂದಿರಿಗೂ ತಾಯಿ ಎಲ್ಲರಿಗೂ ಸಂತೋಷವನ್ನುಂಟು ಮಾಡಿದನು. ಮುಂದೆ ಈ ಸುಭದ್ರೆಯಲ್ಲಿ ಹುಟ್ಟಿದವನೇ ಭಾರತ ವೀರ ಅಭಿಮನ್ಯು.




ಬಹಳಕಾಲದ ಹಿಂದೆ ಚಂಪಾನಗರದಲ್ಲಿ ಸಂಪನ್ನನಾದ ಒಬ್ಬ ಬ್ರಾಹ್ಮಣ ಗೃಹಸ್ಥ ನಿದ್ದನು. ಆತನಿಗೆ ಅಪರೂಪವಾಗಿ ಹೆಣ್ಣು ಮಗು ಜನಿಸಿತು. ಆಕೆಯ ಹೆಸರು ಸುಭದ್ರಾಂಗಿ. ಆಕೆ ಪರಾಕ್ರಮಶಾಲಿಯಾದ ಒಬ್ಬ ಸೌರ್ವಭೌಮನ ಸತಿ ಯಾಗುವಳೆಂದೂ, ಆಕೆಗೆ ಇಬ್ಬರು ಪುತ್ರರು ಹುಟ್ಟುವರೆಂದೂ, ಅವರಲ್ಲೊಬ್ಬನು ಚಕ್ರವರ್ತಿಯಾಗುವನೆಂತಲೂ, ಮತ್ತೊಬ್ಬನು ಸಂಸಾರವನ್ನು ತ್ಯಜಿಸಿ ಸನ್ಯಾಸಿಯಾಗುವನೆಂತಲೂ ಆ ಶಿಶುವಿನ ಜಾತಕವನ್ನು ನೋಡಿದ ದೈವಜ್ಞರು ಭವಿಷ್ಯವನ್ನು ಹೇಳಿದರು.

ಆಕೆ ದೊಡ್ಡವಳಾದಂತೆ ಬ್ರಾಹ್ಮಣನ ಆಶೆಯೂ ಬಲವತ್ತರವಾಗುತಿತ್ತು. ಆಕೆ ಅತ್ಯಂತ ಸುಂದರಿ. ಸರ್ವಲಕ್ಷಣ ಸಂಪನ್ನಳು. ಆಕೆಗೆ ಯುಕ್ತವಯಸ್ಸು ಬರುವವೇಳೆಗೆ ಬ್ರಾಹ್ಮಣನು ತನ್ನ ನಿವಾಸವನ್ನು ಚಂಪಾನಗರದಿಂದ ರಾಜಧಾನಿಯಾದ ಪಾಟಲೀಪುತ್ರಕ್ಕೆ ಬದಲಾಯಿಸಿದನು.

ಆಗ ಪಾಟಲೀಪುತ್ರಕ್ಕೆ ಬಿಂದುಸಾರನು ರಾಜನಾಗಿದ್ದನು. ಆತನಿಗೆ ಹಲವರು ಹೆಂಡತಿಯರು. ಎಲ್ಲರಲ್ಲೂ ಮಕ್ಕಳಾದರು. ಪಟ್ಟದರಸಿಗೆ ಹುಟ್ಟಿದ ಮಗನ ಹೆಸರು ಸುಷೀಮ.

ಪಾಟಲೀ ಪುತ್ರವನ್ನು ಸೇರಿಕೊಂಡ ಆ ಬ್ರಾಹ್ಮಣನು ಒಂದು ದಿನ ತನ್ನ ಮಗಳನ್ನು ರಾಜನ ದರ್ಶನಕ್ಕೆ ಕರೆದೊಯ್ದು "ಪ್ರಭೂ! ಎಲ್ಲವಿಧದಲ್ಲೂ ಅನುಕೂಲವತಿಯಾದ ನನ್ನ ಈ ಮಗಳನ್ನು ಮಹಾಸ್ವಾಮಿಯವರಿಗೆ ಒಪ್ಪಿಸುತ್ತಿದ್ದೇನೆ. ದಯವಿಟ್ಟು ಈಕೆಯನ್ನು ರಾಣಿಯನ್ನಾಗಿ ಸ್ವಿಕರಿಸಬೇಕು" ಎಂದು ಪ್ರಾರ್ಥಿಸಿಕೊಂಡನು.

ರಾಜನು ಇದಕ್ಕೆ ಸಮ್ಮತಿಸಿದ. ಆಕೆಯನ್ನು ಅಂತಃಪುರಕ್ಕೆ ಕಳುಹಿಸಿದ. ಮಿಕ್ಕ ರಾಣಿಗಳಂತೆ ಸುಭದ್ರಾಂಗಿಗೂಸಹ ಒಂದು ಭವನವನ್ನು ಪ್ರತ್ಯೇಕವಾಗಿ ಸಿದ್ಧಪಡಿಸಿದರು.

ಪ್ರತ್ಯೇಕವಾಗಿ ಏರ್ಪಡಿಸಿದ್ದರೂ ಸಹ ಸುಭದ್ರಾಂಗಿ ಅಲ್ಲಿಗೆ ಬಂದಾಗಲಿಂದ ಅಂತಃಪುರದಲ್ಲಿ ತುಸ ಗಲಿಬಿಲಿ ಎದ್ದಿತು. ಮಿಕ್ಕ

ಪಿ. ಶಾಂತರಾಜು - ಬೆಂಗಳೂರು




ರಾಣಿಯರಿಗೆಲ್ಲಾ ಈಕೆಯ ಮೇಲೆ ಅಸೂಯೆ ಜನಿಸಿತು. ಅವರೆಲ್ಲಾ ಸೇರಿ ಸುಭದ್ರಾಂಗಿಯ ಮೇಲೆ ದಿನಾ ರಾಜನೊಂದಿಗೆ ಏನೋ ಒಂದು ಚಾಡಿ ಹೇಳುವರು. ಆಕೆಯಮೇಲೆ ಆತನಿಗೆ ಜಿಗುಪ್ಸೆ ಜನಿಸುವಂತೆ ಪರಿಸ್ಥಿತಿಗಳನ್ನು ಕಲ್ಪಿಸಿದರು. ಆದರೆ ಅವರೇನು ಹೇಳಿದರೂ ರಾಜನು ಕಿವಿಗೊಡಲಿಲ್ಲ. ಸುಭದ್ರಾಂಗಿಯ ಸೌಂದರ್ಯ, ಸುಗುಣಗಳಿಗೆ ಆತನು ಮಾರು ಹೋದ. ರಾಜನು ಆಕೆಯನ್ನುಸಹ ತನ್ನ ಹೆಂಡತಿಯನ್ನಾಗಿ ಸ್ವೀಕರಿಸಿದನು.

ಬಿಂದುಸಾರನಿಗೆ ಸುಭದ್ರಾಂಗಿಯಿಂದ ಅಶೋಕ, ವಿಗತಶೋಕರೆಂಬ ಇಬ್ಬರು ಕುಮಾರರು ಜನಿಸಿದರು. ಆದರೆ ಪರಿಸ್ಥಿತಿಗಳು ಉಲ್ಬಣಿಸಿದುದರಿಂದ ಕ್ರಮೇಣ ರಾಜನಿಗೆ ಸುಭದ್ರಾಂಗಿಯ ಮತ್ತು ಆಕೆಯ ಮಕ್ಕಳಮೇಲಿನ ಮಮತೆ, ಅಪೇಕ್ಷೆಗಳು ಕಡಿಮೆಯಾದವು. ರಾಜನಿಗೆ ಅವರಮೇಲಿನ ಮಮತೆ ಕಡಿಮೆಯಾದಂದಿನಿಂದ ಸುಭದ್ರಾಂಗಿಗೂ ಆಕೆಯ ಮಕ್ಕಳಿಗೂ ಕಷ್ಟದಿನಗಳು ಬಂದುವು.

* * *

ರಾಜನಿಗೆ ಪಿಂಗಳವತ್ಸನೆಂಬ ಬೌದ್ಧ ಭಿಕ್ಷುವಿನಲ್ಲಿ ಅಪಾರ ಭಕ್ತಿ. ಒಂದು ದಿನ ರಾಜನು ಆತನನ್ನು ಅರಮನೆಗೆ ಆಹ್ವಾನಿಸಿ "ಗುರುವರ್ಯರೇ, ವಿಶಾಲವಾದ ನನ್ನ ಸಾಮ್ರಾಜ್ಯವನ್ನು ಆಳಲು ನನ್ನನಂತರ ರಾಜಕುಮಾರರಲ್ಲಿ ಯಾರಿಗೆ ಅರ್ಹತೆ, ಸಾಮರ್ಥ್ಯವಿದೆಯೋ ತಿಳಿದುಕೊಳ್ಳಬೇಕು. ಇದಕ್ಕಾಗಿ ಒಂದು ಪರೀಕ್ಷೆಯಿಟ್ಟು ಅರ್ಹರು ಯಾರೋ ನೀವು ನಿರ್ಣಯಿಸಿ ಹೇಳಬೇಕು" ಎಂದ.

ನಗರದಾಚೆ ಉದ್ಯಾನವನದಲ್ಲಿದ್ದ ಸುವರ್ಣ ಮಂಟಪದ ಹತ್ತಿರ ರಾಜಕುಮಾರರೆಲ್ಲಾ ಸಮಾವೇಶವಾಗಲು ಉಚಿತ ಏರ್ಪಾಟುಗಳು ನಡೆದವು. ರಾಜನೂ ಬಂದ. ಪಿಂಗಳವತ್ಸನೂ ಬಂದ. ರಾಜಕುಮಾರರೆಲ್ಲರೂ ಬಂದರು. ಅಶೋಕನೊಬ್ಬನು ಮಾತ್ರ ಅಲ್ಲಿ ಕಾಣಬರಲಿಲ್ಲ. ಆತನಿಗೆ ಆಹ್ವಾನವೇ ಹೋಗಿರಲಿಲ್ಲ.

ಸುಭದ್ರಾಂಗಿ ತನ್ನ ಮಗನಾದ ಅಶೋಕನನ್ನು ಹತ್ತಿರಕ್ಕೆ ಕರೆದು "ಮಗೂ, ರಾಜಕುಮಾರರೆಲ್ಲಾ ಪರೀಕ್ಷೆಗಾಗಿ ಸುವರ್ಣಮಂಟಪಕ್ಕೆ ಹೋಗಿರುವರು. ನೀನೂಸಹ ಅಲ್ಲಿಗೆ ಹೋಗುವುದು ಉಚಿತವಲ್ಲವೇ?" ಎಂದಳು.



ಅದಕ್ಕೆ ಆ ಹುಡುಗ "ಅಮ್ಮಾ, ನನ್ನನ್ನು ನೋಡಿದರೇ ಸಾಕು ಅಪ್ಪ ಅಸಹ್ಯ ಪಟ್ಟು ಕೊಳ್ಳುತ್ತಾರೆ. ಈ ಪರಿಸ್ಥಿತಿಯಲ್ಲಿ ನಾನು ಹೋಗಿ ಅವರೆದುರು ಬೀಳುವುದು ಉಚಿತ ವಾಗುವುದೇ?" ಎಂದ.

ಏನಾದರೂ ಸರಿ ಹೋಗಿಯೇ ತೀರ ಬೇಕೆಂದು ತಾಯಿ ಹಠಹಿಡಿದಳು. ತಾಯಿಯ ಮಾತನ್ನು ತಳ್ಳಿಹಾಕಲು ಅಶೋಕನಿಗೆ ಮನ ಬರಲಿಲ್ಲ. ಬಾಲಕನು ಹೊರಡುವ ಮುಂಚೆ ತಾಯಿ ಸ್ವಲ್ಪ ತಂಗಳನ್ನ ಮತ್ತು ಮೊಸರನ್ನು ಮಡಿಕೆಯಲ್ಲಿಟ್ಟು ಕಟ್ಟಿಕೊಟ್ಟಳು.

ಅಶೋಕನು ಹೋಗುತ್ತಿರಲು ದಾರಿಯಲ್ಲಿ ಮಂತ್ರಿಕುಮಾರನಾದ ರಾಧಾಗುಪ್ತನು ಎದುರಾದ. ರಾಧಾಗುಪ್ತನು ಅಶೋಕನ ಶ್ರೇಯೋಕಾಂಕ್ಷಿ. ಗೆಳೆಯನಿಗೆ ವಾಹನ ಒಂದನ್ನು ಒದಗಿಸಿ, ಸುವರ್ಣಮಂಟಪದಲ್ಲಿ ನಡೆಯುವ ಪರೀಕ್ಷೆಗೆ ಅಶೋಕನನ್ನು ಕಳುಹಿಸಲು ತಾಪತ್ರಯಪಟ್ಟ. ಆದರೆ ಎಷ್ಟು ಪ್ರಯತ್ನಪಟ್ಟರೂ ಒಳ್ಳೇ ವಾಹನ ಸಿಗವಾಯಿತು.

ಕೊನೆಗೆ ರಾಜನ ಗಜಶಾಲೆಯಲ್ಲಿ ಒಂದು ಮುದಿ ಆನೆ ಕಾಣಿಸಲು, ಅದನ್ನು ಅಶೋಕನಿಗೆ ಕೊಟ್ಟು, ಪರೀಕ್ಷೆಗೆ ಹೋಗುವಂತೆ ಹೇಳಿದ. ಅಶೋಕನು ಸುವರ್ಣಮಂಟಪವನ್ನು ಸೇರುವವೇಳೆಗಾಗಲೇ ರಾಜಕುಮಾರರೆಲ್ಲಾ ಅವರವರಿಗೆ ಸಿದ್ಧಪಡಿಸಿದ್ಧ ಪೀಠಗಳಲ್ಲಿ ಆಸನಾರೂಢರಾಗಿದ್ದರು. ಒಂದು ಪೀಠವಾದರೂ ಖಾಲಿಯಿರಲಿಲ್ಲ. ಇದನ್ನು ಕಂಡು




ಅಶೋಕನು ನೆಲದಮೇಲೆಯೇ ಕುಳಿತುಕೊಂಡ. ಅಶೋಕನು ಅಲ್ಲಿಗೆ ಬಂದುದನ್ನಾಗಲೀ, ಕುಳಿತುಕೊಂಡಿರುವುದನ್ನಾಗಲೀ ಯಾರೂ ಗಮನಿಸಲೇ ಇಲ್ಲ. ಎಲ್ಲರೂ ಪರೀಕ್ಷೆಯ ಗಡಿಬಿಡಿಯಲ್ಲಿ ಮುಳುಗಿದ್ದರು.

ಪರೀಕ್ಷಾ ಸಮಯ ಬಂತು. ಪಿಂಗಳವತ್ಸನು ತನ್ನ ಸುತ್ತಲೂ ಕುಳಿತಿದ್ದ ರಾಜಕುಮಾರರೆಲ್ಲರ ಮುಖಗಳನ್ನೂ ತೀವ್ರವಾಗಿ ಪರೀಕ್ಷಿಸಿ ನೋಡಿದ. ಅಶೋಕನ ಮುಖದಲ್ಲಿ ಕಂಡ ರಾಜಲಕ್ಷಣಗಳು ಮತ್ತೆ ಯಾರ ಮುಖದಲ್ಲೂ ಕಾಣಿಸಲಿಲ್ಲ. ಆದರೆ ಆ ಬಾಲಕನಮೇಲೆ ರಾಜನಿಗೆ ಇಷ್ಟವಿಲ್ಲದಿರುವ ವಿಷಯ ಆತನಿಗೆ ಗೊತ್ತು. ನಿಜವಾದ ವಿಷಯ ತಿಳಿಸಿದರೆ ರಾಜನಿಗೆ ಕೋಪ




ತನ್ನ ಹಿರಿಯ ಮಗನಾದ 'ಸುಷೀಮ' ನನ್ನು ಉದ್ದೇಶಿಸಿ ಗುರುಗಳು ಆ ರೀತಿ ಹೇಳಿರ ಬಹುದೆಂದು ಭಾವಿಸಿದ ರಾಜ. ಆದರೂ ಯಾವ ನಿರ್ಣಯಕ್ಕೂ ಬರಲಾರದೆ ಗುರು ವರ್ಯನನ್ನು ಬಿಡಿಸಿ ಹೇಳುವಂತೆ ಪ್ರಾರ್ಥಿಸಿದ.

ಆಗ ಪಿಂಗಳವತ್ಸನು "ಮಹಾಪ್ರಭೂ, ಎಷ್ಟೇ ವಯಸ್ಸಾದರೂ ಆನೆಗೆ ಇರುವ ಗೌರವ ಬೇರೆ ವಾಹನಗಳಿಗೆ ಇರುವುದಿಲ್ಲ. ಗಜಾರೋಹಣವೆನ್ನುವುದು ಸಾಮಾನ್ಯ ವಿಷಯವೇನಲ್ಲ" ಎಂದ.

ಈ ಸಮಾಧಾನದಿಂದ ರಾಜನಿಗೆ ತೃಪ್ತಿ ಯುಂಟಾಗಲಿಲ್ಲ. "ಗುರುವರ್ಯರೇ, ದಯ ವಿಟ್ಟು ರಾಜಕುಮಾರರನ್ನು ಮತ್ತೊಂದು ಸಲ ಪರೀಕ್ಷೆಮಾಡಿ" ಎಂದು ಪ್ರಾರ್ಥಿಸಿದ.

ಗುರುವರ್ಯನು ಮೊದಲು ಹೇಳಿದ ವಿಷಯವನ್ನೇ ಪುಷ್ಟೀಕರಿಸುತ್ತಾ "ಮಹಾ ರಾಜನೇ, ಇಲ್ಲಿಗೆ ಬಂದಿರುವ ರಾಜಕುಮಾರ ರಲ್ಲಿ ಯಾರ ವಾಹನ, ಆಸನ, ಭೋಜನ, ಪಾನೀಯ, ಭೋಜನ ಪಾತ್ರೆಗಳು ಶ್ರೇಷ್ಠ ವಾದುವೋ ಆತನೇ ನಿಮ್ಮ ತರುವಾಯ ಸಿಂಹಾಸನವನ್ನೇರುವನು; ಇದರಲ್ಲಿ ಸಂದೇ ಹವೇ ಇಲ್ಲ" ಎಂದು ಒತ್ತಿ ಹೇಳಿದ.

ರಾಜನಿಗೆ ಇದೂ ಸರಿಹೋಗಲಿಲ್ಲ. ಅಷ್ಟೇ ಅಲ್ಲ, ಆತನಿಗೆ ಅರ್ಥವೂ ಆಗಲಿಲ್ಲ.

ಗುರುವರ್ಯನು ಹೇಳಿದ ಮಾತುಗಳನ್ನು ಕೇಳಿ ರಾಜಕುಮಾರರು ಮತ್ತೆ ತಮ್ಮ ತಮ್ಮ ವಾಹನ, ಆಸನ, ಭೋಜನಾದಿಗಳು ಶ್ರೇಷ್ಠ

ಬರುತ್ತದೆ. ಆದುದರಿಂದ ಜಾಣತನದಿಂದ ಸತ್ಯವನ್ನು ಬಯಲುಮಾಡುವ ಪರಿಸ್ಥಿತಿ ಒದಗಿ ಬಂದಿದೆ. "ಪ್ರಭೂ, ಇಲ್ಲಿ ನೆರೆದಿರುವ ರಾಜ ಕುಮಾರರಲ್ಲಿ ಯಾರು ಶ್ರೇಷ್ಠವಾದ ವಾಹನ ವನ್ನು ಹತ್ತಿ ಬಂದರೋ ಅವರೇ ನಿಮ್ಮನಂತರ ಮಗಧರಾಜ್ಯದ ಸಾರ್ವಭೌಮನಾಗುವನು".

ರಾಜಕುಮಾರರಲ್ಲಿ ಕೆಲವರು ಅಪೂರ್ವ ಅಶ್ವಗಳಮೇಲೆಯೂ, ಮತ್ತೆ ಕೆಲವರು ಅಂದ ವಾದ ರಥಗಳಲ್ಲಿಯೂ ಬಂದಿದ್ದರು. ಗುರು ಗಳ ಮಾತು ಕೇಳಿದಕೂಡಲೇ ಅವರವರಲ್ಲೇ "ನಾನು ಶ್ರೇಷ್ಠವಾದ ವಾಹನವನ್ನು ಹತ್ತಿ ಬಂದೆ. ಆದುದರಿಂದ ನಾನೇ ರಾಜನಾಗು ವೆನು" ಎಂದು ಪ್ರತಿಯೊಬ್ಬರೂ ತಮ್ಮಲ್ಲೇ ಆನಂದಪಡುತ್ತಿದ್ದರು.



ವೆಂದು ಭಾವಿಸಿಕೊಂಡು ಆನಂದಪಡು ತ್ತಿದ್ದರು. ಕಾರಣವೇನೆಂದರೆ ಅವರು ಆಸನ ಗಳಿಗೆ ಬಹಳ ಬೆಲೆಬಾಳುವ ವಸ್ತ್ರಗಳನ್ನು ಉಪಯೋಗಿಸಿದ್ದರು. ಸದಾ ಮೃಷ್ಟಾನ್ನ ಭೋಜನ. ಊಟಮಾಡಲು ಉಪಯೋಗಿ ಸುವ ಪಾತ್ರೆಗಳೋ ಬಂಗಾರದಿಂದ ಮಾಡಿ ದುದು. ಪಾನೀಯವೆಂದರೆ ರುಚಿಕರವಾದ ದ್ರಾಕ್ಷಾಸವ!

ಅಶೋಕನ ವಿಷಯವೇ ಬೇರೆ. ಆತನ ವಾಹನ ಒಂದು ಮುದಿ ಆನೆ; ಆಸನವೊ ಬರಿ ನೆಲ; ಊಟವೋ ಮೊಸರನ್ನ; ಭೋಜನ ಪಾತ್ರೆಗಳೋ ಮಡಿಕೆ; ಪಾನೀಯವೇನೆಂದರೆ ಬರಿನೀರು! ಗುರುವರ್ಯನು ರಾಜನಿಗೆ ಇವು ಗಳ ನಡುವೆ ಇರುವ ಅಂತರವನ್ನು ತೋರಿಸಿ "ಪ್ರಭೂ, ನಿಜ ನುಡಿಯಬೇಕೆಂದರೆ ಅಶೋ ಕನು ತಂದುಕೊಂಡಿರುವ ವಸ್ತುಗಳು ಇತರ ರಾಜಕುಮಾರರು ತಂದುಕೊಂಡಿರುವ ವಸ್ತು ಗಳಿಗಿಂತ ಬಹಳ ಶ್ರೇಷ್ಠ" ಎಂದು ಹೇಳಿ, ಆತನಿಂದ ಅಪ್ಪಣೆ ಪಡೆದು ಹೊರಟುಹೋದ.

ಬಿಂದುಸಾರನಿಗೆ ಅಶೋಕನೆಂದರೆ ಆಗದು ಆದುದರಿಂದ ರಾಜಕಾರ್ಯಗಳಲ್ಲಿ ಆತನು ಪ್ರವೇಶಮಾಡಲು ಅವಕಾಶ ಕೊಡುತ್ತಿರಲಿಲ್ಲ. ಆದರೆ ಒಮ್ಮೆ ಅನಿರೀಕ್ಷಿತವಾಗಿ ಅಶೋಕನಿಗೆ ಅವಕಾಶ ವೊದಗಿತು.

ಸಮೀಪದಲ್ಲೇ ಇದ್ದ ತಕ್ಷಶಿಲೆ ಯಲ್ಲಿ ದಂಗೆ ಎದ್ದಿತು. ಅಶೋಕನು ತನ್ನನ್ನು ಅಲ್ಲಿಗೆ ಕಳು ಹಿಸಿ ಕೊಡುವಂತೆ ತಂದೆಯನ್ನು ಕೇಳಿ, ಆತನ ಅಪ್ಪಣೆಮೇರೆಗೆ ಅಲ್ಲಿಗೆ ಹೋಗಿ ಆ ದಂಗೆ ಯನ್ನು ಅಡಗಿಸಿದ. ಕೆಲವು ದಿನಗಳಲ್ಲಿ ವಿಜಯಶಾಲಿಯಾಗಿ ನಗರಕ್ಕೆ ಹಿಂತಿರುಗಿದ.

ಬಿಂದುಸಾರನ ಹಿರಿಯಮಗ ಸುಷೀಮ ಚಂಚಲಸ್ವಭಾವದವನು. ಒಂದು ದಿನ ಆತನು ಮುಖ್ಯ ಮಂತ್ರಿಯೊಂದಿಗೆ ತಮಾಷೆ ಯಾಡುತ್ತಾ ಆತನ ತಲೆಯಮೇಲೆ ಹೊಡೆದ. ಮಂತ್ರಿಗೆ ಬಹಳ ಕೋಪಬಂತು. 'ಅಪ್ಪಾ, ಇನ್ನೂ, ರಾಜನಾಗುವ ಮೊದಲೇ ವೃದ್ಧ ಮಂತ್ರಿಗಳನ್ನು ಹೊಡೆಯಲು ಪ್ರಾರಂಭಿ ಸಿರುವೆ. ರಾಜನೇ ಆದರೆ ನಮ್ಮ ತಲೆಗಳನ್ನೂ ತುಂಡರಿಸುವಂತೆ ತೋರುವುದು. ಸರಿ, ನೀನು ಸಿಂಹಾಸನ್ನವನ್ನೇರದಂತೆ ನಾನು ಜಾಗ್ರತೆ ವಹಿಸುವೆನು' ಎಂದು ಅಂದುಕೊಂಡ.



ಆ ಕ್ಷಣದಿಂದ ಮುಖ್ಯಮಂತ್ರಿ ಮಿಕ್ಕ ಮಂತ್ರಿಗಳೊಂದಿಗೆ ಒಳ ಸಂಚು ಪ್ರಾರಂಭಿಸಿದ. ಅದರ ಫಲವಾಗಿ ಉಳಿದೆಲ್ಲ ಮಂತ್ರಿಗಳೂ ಅವನಿಗೆ ಎದುರು ತಿರುಗಿಬಿದ್ದರು. ಹೀಗಿರಲು ಮತ್ತೊಂದುಸಾರಿ ತಕ್ಷಶಿಲೆಯಲ್ಲಿ ದಂಗೆ ಎದ್ದಿತು. ಈ ಸಾರಿ ರಾಜನು ಸುಷೀಮನನ್ನು ಕಳುಹಿಸಿದ. ಆದರೆ ಸುಷೀಮನು ದಂಗೆಯನ್ನು ಅಣಗಿಸಲು ಶಕ್ತನಾಗಲಿಲ್ಲ.

ಇಷ್ಟರಲ್ಲಿ ವೃದ್ಧನಾದ ಬಿಂದುಸಾರನಿಗೆ ಕಾಯಿಲೆ ಬಂತು. "ಅಶೋಕನನ್ನು ತಕ್ಷಶಿಲೆಗೆ ಕಳುಹಿಸಿ, ಸುಷೀಮನನ್ನು ನಗರಕ್ಕೆ ಬರಮಾಡಿ, ಅವನಿಗೆ ಪಟ್ಟಕಟ್ಟಬೇಕು" ಎಂದು ಮಂತ್ರಿಗಳೊಂದಿಗೆ ಹೇಳಿದ.

ಮಂತ್ರಿಗಳಿಗೆ ಈ ಏರ್ಪಾಟು ಉಚಿತವಾಗಿ ಕಾಣಿಸಲಿಲ್ಲ; ಅವರಿಗೆ ಹಾಗೆಮಾಡಲು ಇಷ್ಟವೂ ಇಲ್ಲ. ಆದರೆ ರಾಜನಿಗೆ ಹಾಗೆಂದು ತಿಳಿಸಲು ಸಂಕೋಚ. ಆದ್ದರಿಂದ ಅವರು "ಮಹಾಸ್ವಾಮಿ, ಅಶೋಕನು ಈಗ ಅಸ್ವಸ್ಥನಾಗಿದ್ದಾನೆ. ಸ್ವಲ್ಪ ಸುಧಾರಿಸಿದ ತರುವಾಯ ಆತನನ್ನು ಇಲ್ಲಿಗೆ ಕಳುಹಿಸುವೆವು" ಎಂದರು. ಮಂತ್ರಿಗಳೆಲ್ಲಾ ಸಂಚುಹೂಡಿ ಅಶೋಕನಿಗೆ ರೋಗಸ್ಥನ ವೇಷ ಹಾಕಿ, ಚಿಕಿತ್ಸೆಯ ಏರ್ಪಾಟು ಮಾಡಿದರು. ಇದರಿಂದ 'ತನ್ನ ಕೋರಿಕೆ ನೆರವೇರಲಿಲ್ಲವಲ್ಲಾ' ಎಂದು ಬಿಂದುಸಾರನಿಗೆ ಮನೋರೋಗ ಹೆಚ್ಚಾಯಿತು.

ಇದನ್ನು ಕಂಡು ಮಂತ್ರಿಗಳು ಅಶೋಕನಿಗೆ ರಾಜಪೋಷಾಕುಗಳನ್ನು ತೊಡಿಸಿ ಆತನನ್ನು ಬಿಂದುಸಾರನ ಹತ್ತಿರ ಕರೆದುಕೊಂಡು ಹೋಗಿ ಇಂತೆಂದರು: "ಮಹಾಪ್ರಭೂ, ಈಗ ಈತನನ್ನು ಸಿಂಹಾಸನದಮೇಲೆ ಕೂರಿಸಿ ಅಭಿಷಿಕ್ತನನ್ನಾಗಿ ಮಾಡಿ. ಸುಷೀಮನು ಹಿಂದಿರುಗಿದ ಕೂಡಲೇ ಆತನನ್ನೇ ರಾಜನನ್ನಾಗಿ ಮಾಡಬಹುದು."

ರಾಜನಿಗೆ ಅವಸಾನಕಾಲ ಪ್ರಾಪ್ತವಾಯಿತು. ಕೋಪತಾಪಗಳಿಂದ ಮಾತೇ ಹೊರಡದಾಯಿತು. ಆದರೆ ಈಗ ಬೇರೆ ಗತ್ಯಂತರವೇ ಇಲ್ಲ. ಆತನುಕೊನೆಗೆ ಮಂತ್ರಿಗಳ ಸಲಹೆಯಂತೆ ತನ್ನ ಅಪ್ರಿಯಪುತ್ರನಾದ ಅಶೋಕನ ತಲೆಯಮೇಲೆ ತನ್ನ ಕೈಯಿಂದಲೇ ಕಿರೀಟವನ್ನಿಡ ಬೇಕಾಗಿಬಂತು.



# ನಗೆಹನಿ

ಉಪಾಧ್ಯಾಯ:—ಉಪ್ಪಿಗಿಂತ ರುಚಿಯಿಲ್ಲ; ತಾಯಿಗಿಂತ ಬಂಧು ಇಲ್ಲ. ಇದು ಹೇಗೆ?

ಹುಡುಗನೊಬ್ಬ:—ಉಪ್ಪು ಶುರೂ ತಾಯಿಯೇ ಬಡಿಸುತ್ತಾಳೆ. —ಬಿ. ಎಸ್. ಪ್ರಭು

—✣—

ತಂದೆ:—ಲೇ, ಪುಟ್ಟೂ ಬೆಳಿಗ್ಗೆ ನಿನ್ನ ಹತ್ರ ನೂರು ರೂಪಾಯಿ ಕೊಟ್ಟು, ಅಣ್ಣನ ಕೈಗೆ ಕೊಟ್ಟು ಬೇಂಕಿನಲ್ಲಿ ಹಾಕಲಿಕ್ಕೆ ಹೇಳೂಂದೆ ನಲ್ಲಾ, ಹಾಕಿದಾನೋ ಕೇಳಿ ಬಾ—

ಪುಟ್ಟು:—ಅಷ್ಟೊಂದಕ್ಕೆ ಅದನ್ನು ಅಣ್ಣನ ಹತ್ರ ಕೊಡೋದೇನು ಮಹಾ ಅಂತ ನಾನೇ ಬಚ್ಚ ಲೊಲೇಲೇ ಬೆಂಕಿಯಲ್ಲಿ ಹಾಕಿಬಿಟ್ಟೆ ಅಪ್ಪಾ!

—ರಮಾನಂದ

—✣—

ಟೀಚರ್:—ಸ್ವಾಮಿ, ನಿಮ್ಮ ಹುಡುಗನನ್ನು ಸ್ವಲ್ಪ ಖಂಡಿಸಿ. ನಾನು ಕ್ಲಾಸಿನಲ್ಲಿಲ್ಲದಿರು ವಾಗ ತಾನೇ ಟೀಚರ್ ಅಂತ ಹುಡುಗರ ನ್ನೆಲ್ಲಾ ಹೆದರಿಸುತ್ತಾನೆ.

ತಂದೆ:—(ಸಿಟ್ಟಿನಿಂದ) ಯಾಕೋ ನಿನಗಾ ಮುಠ್ಠಾಳ್ ಕೆಲ್ಸ? —ಸೀನು

—✣—

ಹೆಂಡತಿ:—(ನಿದ್ರಿಸುವ ಗಂಡನನ್ನು) ಗ್ರಹಣ ನೋಡಬೇಕೆಂದಿರಲ್ಲಾ! ಎದ್ದು ನೋಡಿ

ಗಂಡ:—(ಆಚೆಗೆ ಹೊರಳಿ ಮಲಗುತ್ತಾ) ಹು-ಹು—ನಾಳೆ ಬೆಳಿಗ್ಗೆ ನೋಡ್ತೇನೆ....

—✣—

"ಏನೋ ಬಿ. ಎ. ಗೆ ಬಾರೋ ನನ್ನ ಜತೇಲಿ"

"ಇನ್ನೂ ಹೈಸ್ಕೂಲೇ ಆಗಿಲ್ಲಲ್ಲೋ ನನಗೆ!"

"ಬಿ. ಎ. ಅಂದರೆ, ಬಾಂಬೇ ಆನಂದ ಭವನ್ ಕಣೋ!"

—ವಿ. ಕೆ. ಶ್ರೀನಿವಾಸಯ್ಯ

ಗುರು:—ಕಿಟ್ಟೂ, ಶಾಲೆ ಹೇಗಿದ್ದಾಗ ಚೆನ್ನಾಗಿ ಕಾಣುತ್ತೆ?

ಕಿಟ್ಟು:—ರಜೆಯಿದ್ದಾಗ ಚೆನ್ನಾಗಿ ಕಾಣಿಸುತ್ತೆ ಸಾರ್.

—ಶ್ಯಾಮರಾವ್ ಕುಲಕರ್ಣಿ

—✣—

ಟೀಚರ್:—ನಿನ್ನೆ ಮಂಗಳವಾರವಾದರೆ ಇಂದು ವಾರ ಯಾವುದೊ?

ಹುಡುಗ:—ಇಂದುವಾರವೇ ಸೋಮವಾರಾಂತ ಅಪ್ಪ ಹೇಳಿದ್ದಾರೆ ಸಾರ್.

—ಜಿ. ಎಂ. ಶಾಸ್ತ್ರಿ

—✣—

ಹೋಟೆಲು ಹುಡುಗ:—ಟಿಫನ್ ಏನು ತರ್ಲೀ ಸಾರ್?

ಗಿರಾಕಿ:—ಒಂದು ಪ್ಲೇಟ್ ಚಟ್ನೀ ಬಾಡ್ಸಿಕೊಳ್ಳಿ ಕ್ಕೊಂದಿಡ್ಲೀ ಸಾಕು. ಮತ್ತೇನೂ ಬೇಡ.

—ರಂಗ

—✣—

ಟೀಚರ್:—ತಿಥಿಗಳೆಷ್ಟೊ? ಶಂಕರಾ?

ಶಂಕರ:—ಕಮ್ಮಾರಂದು, ಅಕ್ಕಸಾಲಿಗಂದು, ಟಂಕಸಾಲಿಗಂದು ಹೀಗೆ ಮೂರು ತಿದಿಗಳು ಸಾರ್.

—✣—

ಟೀಚರ್:—(ಕೋಪದಿಂದ) ನಿನ್ನ ತಲೆ, ಎಲ್ಲ್ಯೊ ರಾಮೂ, ಕಲೆಗಳೆಷ್ಟೋ?

ರಾಮು:—ತಲೇಲಿ ಕಲೆ ಇಲ್ಲಾ ಸಾರ್. ಫುಟ್ ಬಾಲ್ ಆಡಿಬಿದ್ದ ಕಲೆ, ಚಡಗುಡು ಆಡಿ ಬಿದ್ದ ಕಲೆ, ಕ್ರಿಕೆಟ್ ಆಡಿಬಿದ್ದ ಕಲೆ ಇವೆಲ್ಲಾ ನನ್ನ ಕೈಕಾಲುಗಳಲ್ಲಿ ಉಂಟು ಸಾರ್.

—ಕರಣಂ, ಮಾರ್ತಾಂಡರಾವ್

# ನಾಲ್ವರು ಅಪರಾಧಿಗಳು



ಒಂದು ದಿನ ರಾಜಭಟರು ಅಕ್ಬರ್ ಬಾದಶಹನ ಸನ್ನಿಧಿಗೆ ನಾಲ್ವರು ಅಪರಾಧಿಗಳನ್ನು ಹೆಡಮುರಿಕಟ್ಟಿ ಕರೆತಂದರು. ಅವರಲ್ಲಿ ಮೊದಲನೇ ಅಪರಾಧಿಯನ್ನು ಕುರಿತು ಬಾದಶಹನು "ನಿನಗೆ ಇದು ಯೋಗ್ಯವಾದ ಕೆಲಸವಲ್ಲ ಕಂಡೆಯಾ" ಎಂದು ಒಳ್ಳೆಯ ಮಾತಿನಲ್ಲಿ ಹೇಳಿ ಬಿಡುಗಡೆಮಾಡಿಸಿದ. ಎರಡನೇಯವನನ್ನು ಮೂದಲಿಸಿ ಕಳುಹಿಸಿದ. ಭಟರಿಂದ ಮೂರನೇಯವನನ್ನು ಕತ್ತು ಹಿಡಿದು ಹೊರಕ್ಕೆ ನೂಕಿಸಿದ.

ನಾಲ್ಕನೇಯವನಿಗೆ ಮೂಗು, ಕಿವಿಕತ್ತರಿಸಿ, ತಲೆ ಬೋಳಿಸಿ, ಸುಣ್ಣದ ಬೊಟ್ಟಿಡಿಸಿ, ಕತ್ತೆ ಮೇಲೆ ಕೂರಿಸಿ, ಮೆರವಣಿಗೆ ಮಾಡಿಸುವಂತೆ ಕಠಿನಾಜ್ಞೆ ಮಾಡಿದ, ಚಕ್ರವರ್ತಿ.

ಈ ತೀರ್ಪು ಕೇಳಿ ಸಭಿಕರು ಚಕಿತರಾದರು. ಅವರವರಲ್ಲಿ ಗುಸಗುಸ ಮಾತು ಪ್ರಾರಂಭವಾಯಿತು. ಪ್ರಸಿದ್ಧ ನ್ಯಾಯವಾದಿಗಳೂಸಹ ಬೆಕ್ಕಸ ಬೆರಗಾದರು.

"ಆಹಾ ಏನು ಪ್ರಜ್ಞೆ, ಏನು ತೀರ್ಪು, ಎಷ್ಟು ಸಮಂಜಸವಾಗಿದೆ, ಎಷ್ಟು ನ್ಯಾಯವಾಗಿದೆ" ಎಂದು ಜನ ನಾನಾವಿಧವಾಗಿ ಮಾತನಾಡಿ ಕೊಳ್ಳುತ್ತಿದ್ದರು. "ನಮ್ಮ ತೀರ್ಪಿನಲ್ಲಿ ಏನಾದರೂ ಸಂದೇಹವಿದ್ದರೆ ಹೇಳಿ, ಸಂಕೋಚಪಡಬೇಡಿ" ಎಂದ ಚಕ್ರವರ್ತಿ.

ಆಗ ಅವರೆಲ್ಲರೂ ಎದ್ದು ನಿಂತು ಚಕ್ರವರ್ತಿಗೆ ಕೈಮುಗಿದು ವಿನಯವಾಗಿ ಹೀಗೆಂದರು: "ಧರ್ಮಮೂರ್ತಿ, ತಮ್ಮ ನ್ಯಾಯವನ್ನು ನಾವು ಸಂದೇಹಿಸುವುದಿಲ್ಲ. ಆ ನಾಲ್ವರೂ ಒಂದೇವಿಧವಾದ ತಪ್ಪು ಮಾಡಿದ್ದಾರೆ. ಅವರಿಗೆ ಬೇರೆಬೇರೆ ಶಿಕ್ಷೆ ವಿಧಿಸಿರುವ ಗುಟ್ಟನ್ನು ನಾವು ಗ್ರಹಿಸಲಾರದಿದ್ದೇವೆ"

ಚಕ್ರವರ್ತಿ ತಲೆದೂಗಿ ಆ ಅಪರಾಧಿಗಳ ಹಿಂದೆ ಇಬ್ಬಿಬ್ಬರು ಗೂಢಚಾರರನ್ನು ನೇಮಿಸಿ ಏನು ನಡೆಯುವುದೋ ಅದನ್ನು ತನಗೆ ಎರಡು ದಿನಗಳಾದಮೇಲೆ ಬಂದು ತಿಳಿಸುವಂತೆ ಹೇಳಿದ.

ಕೆ. ರಾಮಕೃಷ್ಣ, ಕುಂದಾಪುರ

ಹೀಗೆ ಹೋದ ಗೂಢಚಾರರು ಮೂರ ನೇಯ ದಿನ ಬಂದು ನ್ಯಾಯಾಸ್ಥಾನದಲ್ಲಿ ಹಾಜರಾದರು. ಅವರು ತಂದ ಸುದ್ದಿ ಕೇಳಲು ಸಭಿಕರೆಲ್ಲಾ ಕುತೂಹಲದಿಂದ ಕಾದಿದ್ದರು. ಆಗ ಗೂಢಚಾರರ ನಾಯಕನು ಬಾದಶಹ ನಿಗೆ ಈ ರೀತಿ ವರದಿಮಾಡಿದನು.

"ಮಹಾಪ್ರಭೂ, ತಾವು ಮೃದುವಚನ ಗಳಲ್ಲಿ ಮೂದಲಿಸಿ ಬಿಡುಗಡೆ ಮಾಡಿಸಿದ ಮೊದಲನೇಯ ಅಪರಾಧಿ ತನ್ನ ಗೌರವಕ್ಕೆ ಚ್ಯುತಿಬಂದಿತೆಂದು ಮನೆಗೆ ಹೋದ ಕೂಡಲೇ ವಿಷಕುಡಿದು ಸತ್ತುಹೋದ. ಗದರಿಸಿ ಕಳು ಹಿಸಿದ ಎರಡನೇ ಅಪರಾಧಿ ಮನೆ ಮಠವಷ್ಟೇ ಅಲ್ಲದೆ ನಗರವನ್ನೂ ಸಹ ಬಿಟ್ಟು ಹೇಳದೆ ಕೇಳದೆ ಓಡಿ ಹೋದ.

ಒದೆತಿಂದ ಮೂರನೇ ಅಪರಾಧಿ ಅಂದಿ ನಿಂದ ಹತ್ತು ಜನ ಸೇರುವೆಡೆ ಹೋಗುವು ದನ್ನೇ ನಿಲ್ಲಿಸಿ ಇದ್ದಲ್ಲೇ ಜೀವಚ್ಛವದಂತೆ ಕಾಲನೂಕುತ್ತಿದ್ದಾನೆ.

ಕಿವಿ ಮೂಗು ಕಳೆದುಕೊಂಡ ನಾಲ್ಕನೇ ಯವನ ಸಂಗತಿ ತುಂಬಾ ವಿಚಿತ್ರವಾಗಿದೆ. ಪ್ರಭುಗಳು ಲಾಲಿಸಬೇಕು. ಕತ್ತೆಯಮೇಲೆ ಅವನನ್ನು ಕೂರಿಸಿ ಮೆರವಣಿಗೆ ಮಾಡುತ್ತಿರು ವೆವು. ಜನ ಸುತ್ತಲೂ ನಿಂತು ಅವನನ್ನು ಗೇಲಿ ಮಾಡುತ್ತಿದ್ದಾರೆ. ಆ ಗಲಾಟೆ ನೋಡಲು ಅವನ ಹೆಂಡತಿಸಹ ಮನೆಯಿಂದ ಹೊರಗೆ ಬಂದಳು. ಕೂಡಲೇ ಆ ಅಪರಾಧಿ ತನ್ನ ಹೆಂಡತಿಯನ್ನು ಹತ್ತಿರಕ್ಕೆ ಬರುವಂತೆ ಸನ್ನೆ ಮಾಡಿ, ಎಲ್ಲರಿಗೂ ಕೇಳಿಸುವಂತೆ ಗಾರ್ದಭ ಧ್ವನಿಯಲ್ಲಿ 'ಲೇ, ಮನೆಗೆ ಹೋಗಿ ಸ್ನಾನಕ್ಕೆ ನೀರು ಸಿದ್ಧಪಡಿಸು. ಈ ದುರುಳರ ಗೊಡವೆ ಮುಗಿದ ಕೂಡಲೇ ಬಂದುಬಿಡುತ್ತೇನೆ' ಎಂದು ಹೇಳಿದ."

ಈ ವೃತ್ತಾಂತ ಕೇಳಿದ ಸಭಿಕರು ಚಕ್ರ ವರ್ತಿಯ ನ್ಯಾಯಕೌಶಲ್ಯಕ್ಕೆ, ಶಿಕ್ಷಾ ವಿಧಾ ನಕ್ಕೆ ತಲೆದೂಗಿ ಬಾದಶಹನನ್ನು ಪರಿಪರಿ ವಿಧದಲ್ಲಿ ಹೊಗಳಿದರು.

'ನೀಚನಿಗೆ ನೀತಿ ನಿಯಮಗಳಾಗಲೀ, ನಾಚಿಕೆ ಲಜ್ಜೆಯಾಗಲೀ ಇರುವುದಿಲ್ಲವೆಂದು ಹೇಳಲು ಇವನನ್ನು ಮೀರಿದ ನಿದರ್ಶನವಿಲ್ಲ' ಎಂದುಕೊಂಡರು ಜನ.





# ದುರುಳತನ

ಬ್ರಹ್ಮದತ್ತನು ಕಾಶಿರಾಜ್ಯವನ್ನು ಪರಿಪಾಲಿಸುತ್ತಿರುವಾಗ ಒಂದು ಸಾರಿ ಬೋಧಿಸತ್ವನು ದೇವತೆಗಳ ಅಧಿಪತಿಯಾದ ದೇವೇಂದ್ರನಾಗಿರುವ ಸಂಭವವುಂಟಾಯಿತು.

ಬ್ರಹ್ಮದತ್ತನು ಆಗ ಒಳ್ಳೆ ಹರೆಯದಲ್ಲಿದ್ದ. ದೇವತೆಗಳನ್ನೇ ಲೆಕ್ಕಮಾಡದ ಬ್ರಹ್ಮದತ್ತನಿಗೆ ಮಾನವರೊಂದು ಲೆಕ್ಕವೇ? ಪ್ರಾಯದಲ್ಲಿದ್ದ ಬ್ರಹ್ಮದತ್ತನಿಗೆ ಜಂತುಗಳೆಂದರೂ, ಮನುಷ್ಯರೆಂದರೂ, ವಸ್ತುಗಳೆಂದರೂ ಆದೊಂದುರೀತಿ ಜಿಗುಪ್ಸೆ, ತಾತ್ಸಾರ.

ವಯಸ್ಸು ಮೀರಿದ ಜಂತುಗಳು-ಕುದುರೆಯಾಗಲೀ, ಆನೆಯಾಗಲೀ, ಮತ್ತೆ ಯಾವುದೇ ಆಗಲಿ-ಕಣ್ಣಿಗೆ ಕಂಡುಬಂದರೆ ಅವುಗಳನ್ನು ಹೊಡೆದು ಅಟ್ಟುತ್ತಿದ್ದನು. ಒಡಕಲು ಗಾಡಿಯಾಗಲೀ, ಮತ್ತೆ ಯಾವುದಾದರೂ ಹಳೆಯ ವಸ್ತುವಾಗಲೀ ಕಾಣಿಸಿದರೆ ಅದನ್ನು ಚೂರು ಚೂರು ಮಾಡಿಬಿಡುವನು.

ವೃದ್ಧರು ಎದುರಿಗೆ ಕಾಣಿಸಿದರೆ ಅವರ ನೆರೆತ ಗಡ್ಡಗಳನ್ನು ಹಿಡಿದು ಎಳೆಯುವನು. ಪಾತ್ರೆಗಳನ್ನು ಉರುಳಿಸುವಂತೆ ಅವರನ್ನು ಕೆಳಗೆ ಮಲಗಿಸಿ, ಉರುಳಿಸುವನು. ಆ ವೃದ್ಧರು ಸ್ತ್ರೀಯರಾದರೆ ನಾನಾ ಹಿಂಸೆಗಳನ್ನು ಕೊಡುವನು.

ಬ್ರಹ್ಮದತ್ತನು ಮಾಡುತ್ತಿದ್ದ ದೌರ್ಜನ್ಯಕ್ಕೆ, ಕೊಡುತ್ತಿದ್ದ ಕಿರುಕುಳಕ್ಕೆ ಒಂದು ಮಿತಿಯಿರಲಿಲ್ಲ. ಇಂದ್ರಚಂದ್ರರೆಂದರೆ ಲಕ್ಷ್ಯವಿಲ್ಲದ ಆ ರಾಜಕುಮಾರನನ್ನು ಎದುರಿಸಲು ಯಾರಿಗೂ ಸಾಧ್ಯವಾಗಲಿಲ್ಲ.

ಈ ರಾಜನ ದುರುಳತನಕ್ಕೆ, ಯಾತನೆಗಳಿಗೆ ಪ್ರಜೆಗಳು ರೋಸಿಹೋದರು. ಆದರೆ ಅವರೇನೂ ಮಾಡುವಂತಿರಲಿಲ್ಲ. ಎಲ್ಲ ಕಷ್ಟಗಳನ್ನು ಸುಮ್ಮನೆ ನುಂಗಿಕೊಂಡಿದ್ದರು.

ಆ ರಾಜನಿಂದ ದೂರವಿರಿಸಲು ಪ್ರಜೆಗಳು ತಮ್ಮ ವೃದ್ಧಮಾತಾಪಿತರನ್ನು ನೆರೆಹೊರೆಯ ರಾಜ್ಯಗಳಿಗೆ ಕಳುಹಿಸಿಬಿಡುತ್ತಿದ್ದರು. ತಂದೆ ತಾಯಿಗಳನ್ನು ದೂರದೇಶಗಳಲ್ಲಿ ಬಿಟ್ಟು ಅವರಿಂದ ದೂರವಾಗಿರದೆ ಜನರಿಗೆ ಬೇರೆ ಮಾರ್ಗವೇ ಇರಲಿಲ್ಲ.

ಯಚ್. ನಾರಾಯಣರಾವ್

ಈರೀತಿ ಜನ ತಮ್ಮ ತಂದೆತಾಯಿಗಳ ಸೇವಾಕಾರ್ಯಗಳನ್ನು ಮಾಡದಿದ್ದಪ್ರಯುಕ್ತ ಮಹಾಪಾತಕಕ್ಕೆ ಒಳಗಾದರು. ಇಂತಹ ಪಾಪಾತ್ಮರಿಂದ ನರಕವೆಲ್ಲಾ ತುಂಬಿಹೋಯಿತು. ಅತ್ತ ಸ್ವರ್ಗ ಬರಿದಾಗಿತ್ತು.

ಸ್ವರ್ಗಲೋಕದಲ್ಲಿ ಸಾಕಷ್ಟು ಕೆಲಸವಿಲ್ಲದಿರುವುದನ್ನು ಕಂಡು ದೇವೇಂದ್ರನು ತಳಮಳಗೊಂಡನು. ದೀರ್ಘಾಲೋಚನೆಮಾಡಿ ಒಂದು ಉಪಾಯ ಹೂಡಿದ ದೇವೇಂದ್ರ.

ಭೂಲೋಕಕ್ಕೆ ಇಳಿದು ಬಂದು ಆತನು ಕಡು ಬಡವನಾದ ಒಬ್ಬವೃದ್ಧನ ರೂಪವನ್ನು ಧರಿಸಿದ. ಎರಡು ಜಾಡಿಗಳಲ್ಲಿ ಮಜ್ಜಿಗೆ ತುಂಬಿ ಶಿಥಿಲಾವಸ್ಥೆಯಲ್ಲಿದ್ದ ಒಂದು ಗಾಡಿಯಲ್ಲಿಟ್ಟ. ಆ ಗಾಡಿಗೆ ಎರಡು ಬಡ ಎತ್ತುಗಳನ್ನು ಕಟ್ಟಿ ಕಾಶೀನಗರದ ಬೀದಿಗಳಲ್ಲಿ ಹೊಡೆದುಕೊಂಡು ಹೋಗುತ್ತಿದ್ದ.

ಈ ರೀತಿ ದೇವೇಂದ್ರನು ಹೋಗುತ್ತಿರಲು ಅತಿ ವೈಭವವಾಗಿ ಆನೆ ಅಂಬಾರಿಯಲ್ಲಿ ಕುಳಿತು ಮೆರವಣಿಗೆಯಲ್ಲಿ ಬರುತ್ತಿದ್ದ ಬ್ರಹ್ಮದತ್ತನು ಎದುರಾದ. ರಾಜನ ಮೆರವಣಿಗೆ ಎಂದು ಅಂದು ನಗರವನ್ನೆಲ್ಲಾ ಶೃಂಗಾರವಾಗಿ ಅಲಂಕರಿಸಲಾಗಿತ್ತು.

ಗಾಡಿಯಮೇಲಿದ್ದ ವೃದ್ಧನನ್ನು ನೋಡಿದ ಕೂಡಲೇ ರಾಜನು "ಎಲವೋ ಮುದುಕ, ಹೊರಡು ಅತ್ತಕಡೆ. ಎಷ್ಟು ನಿನ್ನ ಸೊಕ್ಕು, ದುರಂಹಂಕಾರ" ಎಂದು ಗಟ್ಟಿಯಾಗಿ ಗದರಿದ. ಅಕ್ಕಪಕ್ಕದಲ್ಲಿದ್ದ ಜನರಿಗೆ ರಾಜನ ಈ



ಕೂಗಾಟ ಕೇಳಿ ತುಂಬಾ ಆಶ್ಚರ್ಯವಾಯಿತು. 'ಎಲಾ, ಏನಿದು ರಾಜನು ಹೀಗೇಕೆ ವರ್ತಿಸುತ್ತಿದ್ದಾನೆ' ಎಂದುಕೊಂಡರು.

ಈ ವಿಚಿತ್ರಕ್ಕೆ ಕಾರಣವೇನೆಂದರೆ ಮಾರು ರೂಪದಲ್ಲಿದ್ದ ದೇವೇಂದ್ರನು ರಾಜನೊಬ್ಬನಿಗೆ ಮಾತ್ರ ಕಾಣಿಸುತ್ತಿದ್ದಾನೇ ಹೊರತು ಜನಗಳಿಗೆ ಕಾಣಿಸುತ್ತಿರಲಿಲ್ಲ. ಆದ್ದರಿಂದ ಎಲ್ಲರೂ ಚೋದ್ಯಗೊಂಡು ಅರಸನಿಗೇನಾಯಿತೋ ಎಂದುಕೊಂಡರು.

ಆ ವೃದ್ಧನು ತನ್ನ ಗಾಡಿಯಲ್ಲಿದ್ದ ಒಂದು ಮಜ್ಜಿಗೆಜಾಡಿ ತೆಗೆದುಕೊಂಡುಹೋಗಿ ಕೋಪದಿಂದ ಅರಚುತ್ತಿದ್ದ ರಾಜನ ನೆತ್ತಿಯಮೇಲೆ ಬಲವಾಗಿ ಬಡಿದ. ಅವನಧೈರ್ಯವನ್ನುನೋಡಿ ಭಯಪಟ್ಟು ರಾಜನು ಫಕ್ಕನೆ ಆನೆಯ




ನಿನಗೆ ವೃದ್ಧಾಪ್ಯ ಬರುವುದಿಲ್ಲವೇ? ಮುದುಕರನ್ನು, ಹಳೇ ವಸ್ತುಗಳನ್ನು ಗೇಲಿ ಮಾಡುವೆಯಾ? ನಿನ್ನ ದುರುಳತನದ ಫಲಿತವಾಗಿ ರಾಜ್ಯದಲ್ಲಿ ಜನಗಳು ಎಷ್ಟು ಬಾಧೆಪಡುತ್ತಿರುವರೋ ನೀನು ಎಂದಾದರೂ ಊಹಿಸಿದೆಯಾ? ನಿನ್ನ ಯಾತನೆಗಳಿಂದ ಅವರು ತಮ್ಮ ವೃದ್ಧ ಮಾತಾಪಿತರನ್ನೂ ದೂರದೇಶಗಳಿಗೆ ಕಳುಹಿಸಿ, ಇಳಿವಯಸ್ಸಿನಲ್ಲಿ ಅವರ ಯೋಗಕ್ಷೇಮವನ್ನು ನೋಡಿಕೊಳ್ಳದೆ ಮಹಾಪಾತಕಕ್ಕೆ ಈಡಾಗುತ್ತಿರುವ ವಿಷಯ ನಿನ್ನ ಗಮನಕ್ಕೆ ಬಂದಿದೆಯೇ? ನೋಡು, ಈ ಕ್ಷಣದಿಂದಲಾದರೂ ವಿವೇಕವನ್ನು ತಂದುಕೊಂಡು ಸರಿಯಾಗಿ ನಡೆದುಕೋ. ಇಲ್ಲದಿದ್ದರೆ ಈ ಸಿಡಿಲು ಬಂದು ನಿನ್ನ ರುಂಡಮುಂಡಗಳನ್ನು ಬೇರೆ ಮಾಡುವುದು. ಹುಷಾರ್" ಎಂದು ಎಚ್ಚರಿಕೆ ಕೊಟ್ಟು ಅದೃಶ್ಯನಾದನು.

ಮೇಲಿಂದ ಇಳಿದು ಅತ್ತಿತ್ತ ಸುತ್ತಾಡಲು ಪ್ರಾರಂಭಿಸಿದ. ಆಗ ದೇವೇಂದ್ರನು ಎರಡನೇ ಜಾಡಿಯನ್ನೂ ಸಹ ತೆಗೆದು ರಾಜನ ತಲೆಯ ಮೇಲೆ ಹೊಡೆದ.

ಕೂಡಲೇ ದೇವೇಂದ್ರನು ಹತ್ತಿಬಂದ ಗಾಡಿ ಅದೃಶ್ಯವಾಯಿತು. ಮಜ್ಜಿಗೆ ಜಾಡಿಗಳೂ ಮಾಯವಾದುವು. ದೇವೇಂದ್ರನು ತನ್ನ ನಿಜ ರೂಪದಿಂದ ರಾಜನಿಗೆ ಪ್ರತ್ಯಕ್ಷನಾದ.

ಪಾದಾಕ್ರಾಂತನಾದ ರಾಜನನ್ನು ಹಿಡಿದೆಬ್ಬಿಸಿ, ದೇವೇಂದ್ರನು "ಎಲೈ ರಾಜನೇ, ಅಹಂಕಾರ ಯಾರಿಗೆ, ನಿನಗೋ, ನನಗೋ? ಕಣ್ಣು ಕಾಣಿಸದೆ ಗರ್ವದಿಂದ ಯಾರು ಎಗರಿ ಬೀಳುತ್ತಿದ್ದಾರೆ? ನೀನೋ, ನಾನೋ? ಸದಾ ನೀನು ಯೌವನವಂತನಾಗಿಯೇ ಇರುವೆಯಾ?

ಅಂದಿನಿಂದ ಬ್ರಹ್ಮದತ್ತನ ನಡವಳಿಕೆ ಪೂರ್ತಿಯಾಗಿ ಬದಲಾಯಿಸಿತು. ಆತನು ವೃದ್ಧರನ್ನು ಕಂಡರೆ ಗೌರವಿಸ ತೊಡಗಿದನು.

ಅದರಿಂದಾಗಿ ಹಿಂದೆ ರಾಜ್ಯದಲ್ಲಿ ಎದ್ದಿದ್ದ ಅಲ್ಲಕಲ್ಲೋಲಗಳು ಕಡಿಮೆಯಾದುವು. ಜನರು ತಮ್ಮ ತಮ್ಮ ತಂದೆತಾಯಿಗಳನ್ನು ತಮ್ಮ ಹತ್ತಿರಕ್ಕೆ ಕರೆಯಿಸಿಕೊಂಡು ಅವರಿಗೆ ಸೇವೆ ಮಾಡುತ್ತಾ ತುಂಬಾ ಸುಖವಾಗಿದ್ದರು. ಬೋಧಿಸತ್ವನ ಪ್ರಭಾವವೇ ಈ ಬದಲಾವಣೆಗೆ ಕಾರಣವಾಯಿತು. ಲೋಕವ್ಯಾಪಾರಗಳೂ ಸರಿಯಾಗಿಯೇ ಸಾಗಿಕೊಂಡು ಬಂದುವು.




ಒಂದಾನೊಂದು ಕಾಲದಲ್ಲಿ ಕುಂಡಲಿನೀ ದ್ವೀಪದ ರಾಜ್ಯಕ್ಕೆ ಚಿತ್ರಸೇನನು ರಾಜನಾಗಿದ್ದನು. ಈ ಕಥೆ ನಡೆಯುವಾಗ ಚಿತ್ರಸೇನನು ಸಿಂಹಾಸನವೇರಿ ಎರಡು ವರ್ಷಗಳು ಮಾತ್ರವೇ ಆಗಿತ್ತು. ಆದರೇನು? ತನ್ನ ಆಳ್ವಿಕೆಯಲ್ಲಿ ಪ್ರಜೆಗಳು ಸಕಲ ಸೌಖ್ಯಗಳನ್ನೂ ಅನುಭವಿಸಬೇಕೆಂದೂ, ತನ್ನ ರಾಜ್ಯ ರಾಮರಾಜ್ಯವಾಗಬೇಕೆಂದೂ ಆತನ ಅಭಿಲಾಷೆ. ಈ ಅಭಿಲಾಷೆಯಂತೆ ಆತನು ತನ್ನ ರಾಜ್ಯದಲ್ಲಿ ತೆರಿಗೆಗಳನ್ನೆಲ್ಲಾ ಅರ್ಧಕ್ಕರ್ಧ ಕಡಿಮೆಮಾಡಿದ.

ರಾಜನ ಧಾರ್ಮಿಕ ಗುಣಕ್ಕೆ ಪ್ರಜೆಗಳು ತುಂಬಾ ಸಂತಸಗೊಂಡರು. ತೆರಿಗೆಯ ಭಾರ ಕಡಿಮೆಯಾದುದರಿಂದ ಜನಗಳಿಗೆ ಸುಖವಾಗಿತ್ತು. ರಾಜ್ಯದ ಯಾವ ಮೂಲೆಯಲ್ಲಿ ನೋಡಿದರೂ ಪ್ರಜೆಗಳು ಚಿತ್ರಸೇನನನ್ನು ಹೊಗಳಿ ಅನೇಕ ಕಥೆಗಳನ್ನು ಹೇಳುತ್ತಿದ್ದರು. ಮೂಲೆ ಮೂಲೆಯಲ್ಲೂ ರಾಜನ ಗುಣಗಾನ ಮಾಡುತ್ತಿದ್ದರು. ಈರೀತಿ ಚಿತ್ರಸೇನ ಮಹಾರಾಜನ ಕೀರ್ತಿ ಹರಡುತಿತ್ತು.

ರಾಜನ ಕೀರ್ತಿ ದಶದಿಕ್ಕುಗಳಲ್ಲಿ ಮೊಳಗುವುದು ಸಂತೋಷಕರವಾದ ವಿಷಯವೇನೋ ಸರಿ. ಆದರೆ ಆತನ ಕೀರ್ತಿ ಹರಡಿದಂತೆ, ಇತ್ತ ಖಜಾನೆ ಖಾಲಿಯಾಗುತಿತ್ತು. ಒಂದೇ ರೀತಿಯಾಗಿ ಖರ್ಚು ಮಾಡುತ್ತಿದ್ದರೆ ಎಷ್ಟು ಹಣವಿದ್ದರೆತಾನೇ ಸಾಕಾಗುತ್ತದೆ! ಹಣವಿಲ್ಲದ ಪ್ರಯುಕ್ತ ಪರಿಪಾಲನೆಯ ಬಿಗುವು ತುಸ ಕಡಿಮೆಯಾಯಿತು.

ಮಂತ್ರಿ ಮಹಾ ಮೇಧಾವಿ. ರಾಜನ ಅಭಿಲಾಷೆಯನ್ನು ಆತನಾಗಲೇ ಗ್ರಹಿಸಿದ್ದ. ಆದರಿಂದ ಮುಂದೆ ಒದಗಬಹುದಾದ ಕಷ್ಟನಷ್ಟಗಳೂ ಸಹ ಆತನಿಗೆ ತಿಳಿದಿತ್ತು. ಆದುದರಿಂದಲೇ ಅವಕಾಶ ಸಿಕ್ಕಿದಾಗಲೆಲ್ಲಾ ರಾಜ





ನಿಗೆ ಈ ವಿಷಯವಾಗಿ ಅನೇಕ ಸಲಹೆಗಳನ್ನು ಕೊಡುತ್ತಿದ್ದ. "ನನ್ನ ಪರಿಪಾಲನೆಯಲ್ಲಿ ಪ್ರಜೆಗಳಿಗೆಲ್ಲಾ ಶಾಶ್ವತವಾದ ಉಪಕಾರ ಮಾಡಿಯೇ ಆಗಬೇಕು" ಎಂದು ದೀಕ್ಷೆ ವಹಿಸಿದ ಚಿತ್ರಸೇನನಿಗೆ ಆತನ ಮಾತುಗಳು ಹಿಡಿಸಲಿಲ್ಲ. ಎಷ್ಟುರೀತಿ ಹೇಳಿದರೂ ರಾಜನು ಆತನ ಮಾತಿಗೆ ಗಮನವೇ ಕೊಡದಿರಲು ಮಂತ್ರಿಗೂ ಸಹ ಬೇಸರವಾಯಿತು.

ಖಜಾನೆ ಖಾಲಿ. ಇನ್ನು ಸುಮ್ಮನಿದ್ದರೆ ಮುಪ್ಪು ಖಂಡಿತವೆಂದು ಗ್ರಹಿಸಿದ ಮಂತ್ರಿ. ಏನಾದರಾಗಲಿ ಎಂದುಕೊಂಡು ಒಂದುದಿನ ಮಹಾರಾಜನೊಂದಿಗೆ ಸ್ಪಷ್ಟವಾಗಿ ಹೀಗೆಂದ: "ಮಹಾಪ್ರಭೂ, ತಾವು ಮಾಡಿರುವ ಶಾಸನದಿಂದ ಪ್ರಜೆಗಳೇನೋ ಸುಖವಾಗಿಯೂ ನೆಮ್ಮದಿಯಾಗಿಯೂ ಜೀವನ ನಡೆಸುತ್ತಿದ್ದಾರೆ. ಆದರೆ ನಮ್ಮ ಬಂಡಾರ ಬರಿದಾಗುತ್ತಿದೆ. ಹಣವಿಲ್ಲದಿದ್ದರೆ ಯಾವ ಕೆಲಸತಾನೇ ಸಾಗುವುದು? ನನ್ನಮಾತಿಗೆ ಬೆಲೆಯಿಲ್ಲದ ಪಕ್ಷಕ್ಕೆ ಈ ಮಂತ್ರಿಪದವಿಯಾದರೂ ನನಗೇಕೆ? ಆದುದರಿಂದ ನನಗೆ ಈ ಹೊಣೆಗಾರಿಕೆಯನ್ನು ತಪ್ಪಿಸಬೇಕೆಂದು ವಿನಯಪೂರ್ವಕವಾಗಿ ಬೇಡಿಕೊಳ್ಳುತ್ತೇನೆ" ಎಂದ.

"ಅಷ್ಟು ವಿಷಮಿಸಿಹೋಯಿತೇ ಪರಿಸ್ಥಿತಿ?" ಎಂದು ರಾಜ ಕೇಳಿದ.

"ಏನು ಹೇಳಲಿ ಮಹಾಪ್ರಭೂ, ಒಂದು ಕಡೆ ಉದ್ಯೋಗಿಗಳಿಗೂ, ಇನ್ನೊಂದು ಕಡೆ ಸೈನಿಕರಿಗೂ ಒಂದೊಂದು ತಿಂಗಳ ಸಂಬಳ ಕೊಡಬೇಕು. ಇನ್ನೊಂದು ವಾರ ಮಾತ್ರವೇ ವ್ಯವಧಿಯಿದೆ, ಕೋಶಾಗಾರದಲ್ಲಿರುವ ಹಣ ನೀರು ಹೊತ್ತುಕೊಂಡು ಬರುವ ಮಾಲಿಗಳ ಸಂಬಳಕ್ಕೂ ಸಾಕಾಗುವಂತಿಲ್ಲ. ಈ ಸ್ಥಿತಿಗೆ ನಾವು ಬರುವೆವೆಂದು ಅಂದೇ ನಾನು ತಮ್ಮಲ್ಲಿ ಮನವಿ ಮಾಡಿಕೊಂಡಿದ್ದೆ" ಎಂದ.

ಇದಕ್ಕೆ ರಾಜನು "ಸರಿ. ನಾಳೆ ದರ್ಬಾರು ಏರ್ಪಡಿಸಿ. ನಮ್ಮ ಮಂತ್ರಿಮಂಡಲವಷ್ಟೇ ಅಲ್ಲ ರಾಜ್ಯದಲ್ಲಿರುವ ಯಾವತ್ತೂ ಪ್ರಮುಖರೂ ಸಭೆಯಲ್ಲಿ ಹಾಜರಾಗುವಂತೆ ಏರ್ಪಾಟು ಮಾಡಿ" ಎಂದ.

ರಾಜನ ಉದ್ದೇಶವೇನೋ ಮಂತ್ರಿಗೆ ತಿಳಿಯಲಿಲ್ಲ. 'ಖಜಾನೆಯಲ್ಲಿ ಹಣವಿಲ್ಲದಿದ್ದರೆ ಹೊಸ ತೆರಿಗೆಗಳನ್ನು ವಿಧಿಸಬೇಕು. ಹೀಗೆ ದರ್ಬಾರು



ಏರ್ಪಡಿಸಿ ಎಲ್ಲರನ್ನೂ ಕರೆಯಿಸಿದರೆ ಆಗುವ ಪ್ರಯೋಜನವಾದರೂ ಏನು?' ಎಂದುಕೊಂಡ. ಏನಾದರೇನು, ರಾಜಾಜ್ಞೆಯನ್ನು ನೆರವೇರಿಸಲೇಬೇಕಷ್ಟೆ?

ರಾಜ್ಯದಲ್ಲೆಲ್ಲಾ ಡಂಗುರ ಹೊಡೆಸಿದರು. ಈ ಸುದ್ದಿ ಕೇಳಿ ಜನಗಳಿಗೆ ಸಂಗತಿ ಸಂದರ್ಭಗಳೊಂದೂ ತಿಳಿಯವು. ಆದರಿಂದ ಅನೇಕ ಊಹಾಪೋಹಗಳು ಎದ್ದುವು. ರಾಜನು ಕರುಣಾಳುವೆಂದು ಎಲ್ಲರಿಗೂ ತಿಳಿದಿತ್ತು. ಆದುದರಿಂದ ಕೆಲವರು 'ತೆರಿಗೆಗಳನ್ನು ಸಂಪೂರ್ಣವಾಗಿ ತೆಗೆದುಹಾಕಬಹುದು. ನಮ್ಮ ಪ್ರಭುಗಳು ಧರ್ಮಾತ್ಮರು' ಎಂಬ ವದಂತಿಯನ್ನು ಹುಟ್ಟಿಸಿದರು. ಕುರಿಗಳಂತಹ ಜನ ಈ ಮಾತು ನಿಜವೆಂತಲೇ ನಂಬಿದರು.

ಮಾರನೆಯದಿನ ದರ್ಬಾರು ಏರ್ಪಟ್ಟಿತು. ಮಂತ್ರಿಪುಂಗವರೂ, ಉನ್ನತೋದ್ಯೋಗಿಗಳೂ ಪುರಪ್ರಮುಖರೂ, ಗಣ್ಯ ಮಹನೀಯರೂ ಸಭೆಗೆ ಬಂದಿದ್ದರು. ಸಭೆ ಕಿಕ್ಕಿರಿದು ತುಂಬಿತ್ತು. ಚಿತ್ರಸೇನ ಮಹಾರಾಜನು ಸಭೆಗೆ ದಯಮಾಡಿಸಿ ಸಿಂಹಾಸನವನ್ನು ಅಲಂಕರಿಸಿದನು. ರಾಜನ ಆಜ್ಞೆಯಮೇರೆಗೆ ಮುಖ್ಯ ಮಂತ್ರಿ ಸಭೆಯನ್ನು ಕುರಿತು ಹೀಗೆಂದ:

'ನಮ್ಮ ಪ್ರಭುಗಳ ವಂಶ ದಯೆ, ದಾನ ಧರ್ಮಗಳಿಗೆ ಹೆಸರು ಪಡೆದುದು. ಪ್ರಜೆಗಳನ್ನು ಹೆತ್ತ ಮಕ್ಕಳಂತೆ ಕಾಪಾಡುವುದು ಅವರ ಕುಲಾಚಾರವಾಗಿದೆ. ನಮ್ಮ ರಾಜ್ಯದಲ್ಲಿ ಹಿಂದೆ ಜಾರಿಯಲ್ಲಿದ್ದ ತೆರಿಗೆಗಳು ತೀರಾ ಕಡಿಮೆಯಾ



ಗಿತ್ತು. ಕರುಣಾಸಾಧುವೆಂದು ಖ್ಯಾತಿ ಪಡೆದಿರುವ ನಮ್ಮ ಚಿತ್ರಸೇನ ಮಹಾರಾಜರ ಆಳ್ವಿಕೆಯಲ್ಲಿ ಆ ತೆರಿಗೆಯಲ್ಲೂಸಹ ಅರ್ಧ ಭಾಗ ಮನ್ನಾಮಾಡಿರುವ ವಿಷಯ ನೀವೆಲ್ಲರೂ ಅರಿತಿರುವಿರಿ. ಈ ತೋರಿಕೆ ಮಾತ್ರ ತೆರಿಗೆಯಿಂದ ರಾಜ್ಯ ಪರಿಪಾಲನೆ ಹೇಗೆ ನಡೆಯಲು ಸಾಧ್ಯವೆಂಬ ಸಮಸ್ಯೆ ಈಗ ಉಂಟಾಗಿದೆ' ಎಂದು ಹೇಳುತ್ತಿರುವಲ್ಲಿ ಸಭೆಯಲ್ಲಿದ್ದಾತನೊಬ್ಬನು ಎದ್ದು ನಿಂತು, "ಪ್ರಜೆಗಳ ಮೇಲೆ ತೆರಿಗೆ ವಿಧಿಸದಿದ್ದರೆ ರಾಜ್ಯಾಡಳಿತವಾಗುವುದಿಲ್ಲವೇ?" ಎಂದು ಪ್ರಶ್ನೆ ಮಾಡಿದ.

ಇದನ್ನು ಕೇಳಿ ದರ್ಬಾರಿನಲ್ಲಿದ್ದವರೆಲ್ಲಾ ಬೆರಗಾದರು. ಮುಖ್ಯ ಮಂತ್ರಿಗೆ ಮತಿ ಹೋದಂತಾಯಿತು!




ಆದರೂ ಧೈರ್ಯವಹಿಸಿ ಮಂತ್ರಿ ಹೀಗೆಂದ: "ನೀವೇ ತುಸ ಆಲೋಚನೆ ಮಾಡಿ. ನಮ್ಮ ರಾಜ್ಯದ ಜನಸಂಖ್ಯೆ ಎಷ್ಟು? ಅಷ್ಟು ಜನರೂ ಸುಖಜೀವನ ಸಾಗಿಸಬೇಕೆಂದರೆ ಎಷ್ಟು ಸೌಕರ್ಯಗಳು ಆವಶ್ಯಕ? ಆರೋಗ್ಯವನ್ನು ಕಾಪಾಡಿಕೊಳ್ಳಲು ಔಷಧಿ ಬೇಡವೇ? ಬೆಳೆದು ದೊಡ್ಡವರಾಗುತ್ತಿರುವ ನಮ್ಮ ಮಕ್ಕಳಿಗೆ ವಿದ್ಯಾಭ್ಯಾಸ ಬೇಕಿಲ್ಲವೇ? ಅದಷ್ಟೇ ಅಲ್ಲ. ನೆರೆಹೊರೆಯ ರಾಜರು ನಮ್ಮ ಮೇಲೆ ಅನಿರೀಕ್ಷಿತವಾಗಿ ಧಾಳಿ ಮಾಡಲು ಬರಬಹುದು. ಅಂತಹ ಪರಿಸ್ಥಿತಿಯಿಂದ ಪಾರುಮಾಡಲು, ರಾಜ್ಯವನ್ನು ರಕ್ಷಿಸಲು ಸೈನ್ಯ ಬೇಕಲ್ಲವೇ? ತೆರಿಗೆ ಹಾಕದಿದ್ದರೆ ಇವುಗಳಿಗೆಲ್ಲಾ ಹಣವು ಎಲ್ಲಿಂದ ಬರುತ್ತದೆ? ಎಲ್ಲಿಂದ ಹಣ ತಂದು ನಮ್ಮ ಪ್ರಜೆಗಳಿಗೆ ಈ ಸೌಕರ್ಯಗಳನ್ನೆಲ್ಲಾ ಒದಗಿಸಬಲ್ಲೆವು? ಆದುದರಿಂದ ತೆರಿಗೆಯೆಂದರೇನೋ ಅದನ್ನು ಏಕೆ ವಿಧಿಸುವರೋ ಎಂದು ಅರಿತುಕೊಳ್ಳುವುದು ಪ್ರಜೆಗಳ ಕರ್ತವ್ಯ."

ಗಂಭೀರವಾಗಿ ಕುಳಿತಿದ್ದ ರಾಜನು ಸಿಂಹಾಸನದಿಂದ ಎದ್ದು ನಿಂತು "ನಮ್ಮ ಮಂತ್ರಿವರ್ಯರು ಹೇಳಿದ ಮಾತುಗಳಲ್ಲಿ ಔಚಿತ್ಯ ಇದೆ. ಆದರೆ ಒಂದುಸಾರಿ ವಜಾಮಾಡಿದ ತೆರಿಗೆಯನ್ನು ಮತ್ತೆ ವಿಧಿಸಿದರೆ ಯಥಾವಿಧಿಯಾಗಿ ವಸೂಲು ಮಾಡಬಲ್ಲೆವೇ? ಎಂದು ನಮ್ಮ ಪ್ರಶ್ನೆ" ಎಂದು ಸಂಶಯ ಸೂಚಿಸಿದ.

ಈ ರೀತಿ ರಾಜನು ಸಂಶಯ ಸೂಚಿಸಲು ಸಭೆಯಲ್ಲಿ ಗುಸಗುಸ ಪ್ರಾರಂಭವಾಯಿತು. ಒಬ್ಬನು ನಿರ್ಭಯವಾಗಿ ಎದ್ದು ನಿಂತು "ಮಹಾಪ್ರಭೂ, ಕಡಿಮೆ ಮಾಡಿದ ತೆರಿಗೆಯನ್ನು ಮತ್ತೆ ವಿಧಿಸುವ ವಿಷಯದಲ್ಲಿ ದುಡುಕಬಾರದು. ಈಗ ದೇಶದೇಶಗಳಲ್ಲಿ ಹರಡುತ್ತಿರುವ ನಿಮ್ಮ ಕೀರ್ತಿಲತೆಯು ಕರ್ಪೂರದ ಆರತಿಯಂತೆ ಆರಿಹೋಗುವುದು! ಪ್ರಭುಗಳು ಕೊಟ್ಟ ಮಾತನ್ನು ಹಿಂತೆಗೆದುಕೊಳ್ಳುವುದು ಸಾಮಾನ್ಯವಾದ ವಿಷಯವಲ್ಲ. ನಿಧಾನವಾಗಿ ಆಲೋಚಿಸಿ ಮುಂದಿನ ಕಾರ್ಯಕ್ಕೆ ಕೈಹಾಕಿ" ಎಂದ.

ಈ ಮಾತುಗಳ ಸತ್ಯಾಂಶ ರಾಜನು ಗ್ರಹಿಸಿದ. ತಾನು ಸಿಂಹಾಸನವೇರಿದಾಗಲಿಂದ ಇಂದಿನವರೆವಿಗೂ ಸಂಪಾದಿಸಿಕೊಂಡು ಬರುತ್ತಿರುವ ಯಶಸ್ಸು ಕ್ಷಣಮಾತ್ರದಲ್ಲಿ ಮಾಯ



ವಾಗುವುದು. ಆದುದರಿಂದ ಕಡಿಮೆ ಮಾಡಿದ ತೆರಿಗೆಯನ್ನು ಹೆಚ್ಚಿಸಲು ಸಾಧ್ಯವಿಲ್ಲ. ಬೇರೆ ಮಾರ್ಗಗಳನ್ನು ಹುಡುಕಲೇಬೇಕು ಎಂದು ನಿರ್ಧರಿಸಿದ ಚಿತ್ರಸೇನ ಮಹಾರಾಜ.



"ಒಂದುಸಾರಿ ಮಾಡಿದ ನಿರ್ಣಯವನ್ನು ನಾವು ಬದಲಾಯಿಸುವುದಿಲ್ಲ. ನಮ್ಮದು ಯಾವಾಗಲೂ ಒಂದೇ ಮಾತು. ಆದುದರಿಂದ ಕಡಿಮೆ ಮಾಡಿದ ತೆರಿಗೆಯನ್ನು ಹೆಚ್ಚಿಸುವುದಿಲ್ಲ. ಹೊಸ ತೆರಿಗೆಯನ್ನು ವಿಧಿಸುವುದು ದೂರದಮಾತಾಯಿತು. ನಮ್ಮ ಆಶಯ ನೀವು ಗ್ರಹಿಸಿದಿರೆಂದು ಭಾವಿಸುವೆವು. ಪರಿಸ್ಥಿತಿ ನಮ್ಮ ಮುಖ್ಯಮಂತ್ರಿಗಳು ಸ್ಪಷ್ಟೀಕರಿಸಿರುವರು. ಚೆನ್ನಾಗಿ ಆಲೋಚಿಸಿ ಯಾವುದಾದರೊಂದು ಉಪಾಯವನ್ನು ನೀವೇ ಹೇಳಿ" ಎಂದರಾಜ. ದರ್ಬಾರೆಲ್ಲಾ ನಿಶ್ಶಬ್ದ, ನೀರವ! ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರೇ ಹೊರತು ಯಾರಿಗೂ ಏನು ಉತ್ತರ ಹೇಳಬೇಕೋ ತೋರದಾಯಿತು.

ಎಲ್ಲರೂ ಸುಮ್ಮನಿರುವುದನ್ನು ಕಂಡು ಸೇನಾಧಿಪತಿ ಎದ್ದುನಿಂತು "ಮಹಾ ಪ್ರಭುಗಳೇ, ಖಜಾನೆ ತುಂಬುವುದೊಂದು ದೊಡ್ಡ ಸಮಸ್ಯೆಯಲ್ಲ. ನಾನು ಅದಕ್ಕೊಂದು ಮಾರ್ಗ ಸೂಚಿಸುವೆನು. ಆದರೆ ಅದು ತುಂಬಾ ಗುಟ್ಟಾದ ವಿಷಯ. ಆದುದರಿಂದ ನಿಮಗೆ ರಹಸ್ಯವಾಗಿ ತಿಳಿಸುವೆನು" ಎಂದ.

ರಾತ್ರಿ ಹತ್ತುಗಂಟೆಗೆ ಏಕಾಂತವಾಗಿ ಉದ್ಯಾನವನದಲ್ಲಿ ಮಹಾರಾಜರನ್ನು ಸೇನಾಧಿಪತಿ ಸಂಧಿಸಬೇಕೆಂದು ನಿರ್ಧಾರವಾಯಿತು. ಸೇನಾಧಿಪತಿಯ ಮಾತನ್ನು ಕೇಳಿದ ಕೂಡಲೇ ದರ್ಬಾರಿನಲ್ಲಿ ನೆರೆದಿದ್ದ ಪ್ರತಿಯೊಬ್ಬ ಸಭಿಕನೂ 'ಈ ರಹಸ್ಯವೇನುತಾನೇ ಇರಬಹುದು?' ಎಂದು ಯೋಚನೆಯ ಮಡುವಿನಲ್ಲಿ ಬಿದ್ದನು. ಮಾರನೆಯದಿನ ಈ ರಹಸ್ಯ ಹೊರಗೆ ಬಂದೇ ಬರುವುದೆಂದು ಆವರೆಲ್ಲಾ ಒಂದು ರೀತಿ ಸಮಾಧಾನ ತಂದುಕೊಂಡರು.

ನಿರ್ಧರಿಸಿದಂತೆ ರಾತ್ರಿ ಹತ್ತುಗಂಟೆಗೆ ಸೇನಾಧಿಪತಿ ಉದ್ಯಾನವನದಲ್ಲಿ ಮಹಾರಾಜರನ್ನು ಭೇಟಿ ಮಾಡಿದನು:

"ಪ್ರಭೂ, ನಮ್ಮ ಖಜಾನೆ ತುಂಬಬೇಕೆಂದರೆ ಇಷ್ಟೊಂದು ಯೋಚನೆ ಮಾಡಬೇಕೇಕೆ? ನಮ್ಮ ರಾಜ್ಯದಲ್ಲಿ ಸಲೀಸಾಗಿ





ಒಂದು ಕಾಸಾದರೂ ವಸೂಲಾಗುವಂತಿಲ್ಲ. ಧನ ಸಂಪಾದನೆ ಹೇಗೆ ಮತ್ತೆ? ಪ್ರಜೆಗಳಿಗೆ ಎಲ್ಲ ಸೌಕರ್ಯಗಳನ್ನು ಒದಗಿಸಿ, ನಮ್ಮ ರಾಜ್ಯ ರಾಮರಾಜ್ಯ ವೆಂಬ ಖ್ಯಾತಿಯನ್ನು ಹೇಗೆ ಉಳಿಸಿಕೊಳುವುದು? ಈ ಸುಮಸ್ಯೆಗೆ ಒಂದೇ ಒಂದು ಮಾರ್ಗವಿದೆ. ನೆರೆ ಹೊರೆ ರಾಜ್ಯಗಳ ಮೇಲೆ ದಾಳಿ ನಡಿಸಿದರೆ ಆಯಿತು. ಯುದ್ಧಮಾಡುವುದು ಕ್ಷತ್ರಿಯ ದರ್ಮ. ಅದರಿಂದಲೇ ಅಲ್ಲವೇ ಪ್ರತಿರಾಜನೂ ಸೈನ್ಯವನ್ನು ಇಟ್ಟುಕೊಂಡಿರುವುದು?" ಎಂದ ಸೇನಾಧಿಪತಿ.

"ಭಲಾ, ಸೇನಾಧಿಪತಿ. ನಿನ್ನ ಸೂಚನೆ ಯುಕ್ತವಾಗಿದೆ. ಆದರೆ ಒಂದೇ ಒಂದು ಸಂದೇಹ. ನಮ್ಮದೇ ಒಂದು ದ್ವೀಪ. ಸುತ್ತಲೂ ನೀರಿದೆ. ಈ ಸಮುದ್ರವನ್ನು ದಾಟಿಕೊಂಡು ಹೋಗಿ ನೆರೆ ರಾಜ್ಯಗಳಮೇಲೆ ದಾಳಿ ಮಾಡಬೇಕೆಂದರೆ ನಮಗೆಷ್ಟು ಬಲಸಾಕು? ಎಷ್ಟು ಸೈನ್ಯ ಬೇಕಾಗುವುದೋ ಆಲೋಚಿಸಿರುತ್ತಿಯಾ?" ಎಂದು ಪ್ರಶ್ನಿಸಿದ-

"ಈ ಎರಡು ವಿಷಯಗಳನ್ನು ನನಗೆಬಿಡಿ."

"ಸರಿ, ಈ ಜವಾಬ್ದಾರಿಯೆಲ್ಲಾ ನಿನ್ನದು. ನಿನ್ನ ಮಾತುಗಳನ್ನು ಸರ್ಕಾರದ ಆಜ್ಞೆಯಂತೆ ಪ್ರಜೆಗಳು ಪಾಲಿಸಿದರಲ್ಲವೇ ನೀನು ಸೈನ್ಯಶೇಖರಣೆ ಮಾಡಲು ಸಹಾಯವಾಗುತ್ತದೆ. ಇಗೋ ಈ ರಾಜಮುದ್ರೆಯನ್ನು ಉಪಯೋಗಿಸಿ ನಿನ್ನ ಕಾರ್ಯವನ್ನು ಮುಗಿಸು" ಎಂದು ತನ್ನ ಉಂಗರವನ್ನು ತೆಗೆದುಕೊಟ್ಟ ರಾಜ.

ರಾಜನಿಂದ ಅಪ್ಪಣೆ ಪಡದು ಸೇನಾಧಿಪತಿ ಹೊರಟು ಹೋದ. ತನ್ನ ಬಿಡಾರಕ್ಕೆ ಹೋಗಿ ತನ್ನ ಸೈನ್ಯದ ಪ್ರಮುಖರನ್ನೆಲ್ಲಾ ಬರಮಾಡಿಕೊಂಡು ಅವರೊಂದಿಗೆ ತಾನು ರಾಜನೊಂದಿಗೆ ನಡೆಸಿದ ಸಂಭಾಷಣೆಯನ್ನು ತಿಳಿಸಿದ. ಆದರೆ ಆತನ ಧ್ವನಿಯಲ್ಲಿ ತುಸ ಸಂಕೋಚ ವಿತ್ತು. ಇದನ್ನು ಕಂಡು ಒಬ್ಬ ಸೈನಿಕನು ಪ್ರಶ್ನೆಮಾಡಿದ.

ಆಗ ಸೇನಾನಿ "ಮತ್ತೇನಿಲ್ಲ. ನೆರೆಹೊರೆಯ ರಾಜ್ಯಗಳಮೇಲೆ ದಂಡೆತ್ತಿ ಹೋಗುತ್ತಿರುವುದು ಅವರ ಕೋಶಾಗಾರಗಳನ್ನು ಕೊಳ್ಳೆ ಹೊಡೆಯುವುದಕ್ಕೇ ಹೊರತು ಆ ರಾಜ್ಯಗಳನ್ನು ವಶಪಡಿಸಿಕೊಂಡು ಆಳುವುದಕ್ಕಾಗಿ ಅಲ್ಲ. ಆದುದರಿಂದ ಈಗಿರುವ ಸೈನ್ಯವೇ






ಸಾಕಾಗದೆ? ಮತ್ತೊಂದು ವಿಷಯ ವೇನೆಂದರೆ ನಾವು ಸೈನ್ಯವನ್ನು ತೆಗೆದುಕೊಂಡು ಕುಂಡ ಲಿನೀ ದ್ವೀಪವನ್ನು ಬಿಟ್ಟ ಕೂಡಲೇ ಒಂದು ವೇಳೆ ಪ್ರಜೆಗಳು ದಂಗೆ ಎದ್ದರೆ ಆಗ ಏನು ಮಾಡುವುದು? ರಾಜ ಮತ್ತು ರಾಜಕುಟುಂಬ ವನ್ನು ಯಾರು ರಕ್ಷಿಸುವರು? ಗಡುಸಾದ ಸಮಸ್ಯೆಯಿದು" ಎಂದು ಹೇಳಿದ.

"ಸೈನ್ಯವಿಲ್ಲದ ರಾಜನಿಗೆ ಭಯ ತಪ್ಪಿದ್ದಲ್ಲ" ಎಂದರು ಯಾರೋ! ವೃದ್ಧ ಸೈನಿಕನೊಬ್ಬನು "ಸೇನಾನಿಯೇ, ಕುಂಡಲಿನೀದೇವಿಯ ಕರುಣೆ ಯಿಂದ ಒಂದು ಉಪಾಯ ಹೊಳೆದಿದೆ" ಎಂದ. ಎಲ್ಲರ ದೃಷ್ಟಿ ಆತನ ಕಡೆ ಹರಿಯಿತು. ಆಗ ಆ ವೃದ್ಧ ಸೈನಿಕನು "ನೋಡಿ, ದೇಶ ದಲ್ಲಿ ವಿಪ್ಲವ ವುಂಟಾಗಬೇಕೆಂದರೆ ಯುವ ಕರೇ ಕಾರಣ. ಆದುದರಿಂದ ಪ್ರತಿಯೊಬ್ಬ ಯುವಕನನ್ನೂ ಯಾವುದಾದರೊಂದು ಬಗೆ ಯಾಗಿ ಆಕರ್ಷಿಸಿ ಸೈನ್ಯಕ್ಕೆ ಸೇರಿಸಿಕೊಳ್ಳ ಬೇಕು" ಎಂದ. ಎಲ್ಲರಿಗೂ ಈ ಉಪಾಯ ಸರಿಕಂಡುಬಂತು. ಕೂಡಲೇ ಹದಿನೈದು ವರ್ಷದಿಂದ ನಲವತ್ತು ವರ್ಷಗಳೊಳಗೆ ಇರು ವವರೆಲ್ಲಾ ಸೈನ್ಯಕ್ಕೆ ಸೇರಬೇಕೆಂದು ಪ್ರಕಟನೆ ಹೊರಡಿಸಿದರು. ಅದಕ್ಕೆ ಅಗತ್ಯವಾದ ಒಡಂಬ ಡಿಕೆ ಪತ್ರಗಳನ್ನು ರಾಜಮುದ್ರೆಯೊಂದಿಗೆ ತಯಾರಿಸಿ ಸಿದ್ಧಪಡಿಸಿದರು.

ಮಾರನೇಯ ದಿನ ಸೈನಿಕರು ಆ ಪತ್ರ ಗಳನ್ನು ತೆಗೆದುಕೊಂಡು ಹೋಗಿ ಪ್ರತಿ ಗ್ರಾಮದಲ್ಲೂ ಮೇಲ್ಕಂಡ ವಯಸ್ಸಿನ ಪ್ರತಿ



ಪುರುಷನನ್ನೂ ಸೈನ್ಯಕ್ಕೆ ಸೇರಿಸಿಕೊಂಡರು. ಆದರೆ ಕೆಲವರು ಸೈನ್ಯಕ್ಕೆ ಸೇರಲು ಇಷ್ಟ ಪಡಲಿಲ್ಲ. 'ಬೇಕಾದರೆ ನೀವು ಕೇಳಿದಷ್ಟು ತೆರಿಗೆಗಳನ್ನು ಸಲ್ಲಿಸುವೆವು. ದಯವಿಟ್ಟು ನಮ್ಮನ್ನು ಸೈನ್ಯಕ್ಕೆ ಸೇರುವಂತೆ ಬಲವಂತ ಮಾಡಬೇಡಿ. ತಂದೆತಾಯಿಗಳಿಂದ, ಮಡದಿ ಮಕ್ಕಳಿಂದ ನಮ್ಮನ್ನು ಅಗಲಿಸಬೇಡಿ" ಎಂದು ಬೇಡಿಕೊಂಡರು. ಆದರೆ ಅವರ ಮೊರೆಯನ್ನು ಕೇಳುವ ದಾತನ್ಯಾರು?

ಇಚ್ಛಾಪೂರ್ವಕವಾಗಿ ಸೈನ್ಯಕ್ಕೆ ಸೇರಿ ದವರು ಮರ್ಯಾದೆಯಾಗಿ ಸೈನಿಕರ ಸಂಗಡ ಹೊರಟರು. ಇಷ್ಟವಿಲ್ಲದವರನ್ನು ಬಲವಂತ ದಿಂದ ಕೈಕಾಲು ಕಟ್ಟಿ ಡೋಲಿಗಳಲ್ಲಿರಿಸಿ ಹೊತ್ತುಕೊಂಡು ಹೋದರು.





ಪ್ರಜೆಗಳು ರಾಜನ ಹತ್ತಿರ ಹೋಗಿ ಗೋಳಿಟ್ಟುಕೊಂಡರು. ಅದಕ್ಕೆ ರಾಜನು "ನಮ್ಮ ಕೀರ್ತಿಯನ್ನು ಹೊಗಳಿ ನಿಮ್ಮಲ್ಲಿ ಕೆಲವರು ನಮ್ಮಮೇಲೆ ಎಷ್ಟೋ ಕಥೆಗಳನ್ನು ಬರೆದಿದ್ದೀರಿ; ಕಾವ್ಯಗಳನ್ನು ಕಟ್ಟಿರುವಿರಿ. ಈಗ ಮತ್ತೆ ನಾವು ತೆರಿಗೆಗಳನ್ನು ಏರಿಸಿದರೆ ಅದೇ ಬಾಯಿಯಿಂದ ನಮ್ಮನ್ನು ತೆಗಳುವುದಿಲ್ಲವೇ? ಆದುದರಿಂದ ಈಗ ನಾವೇನೂ ಮಾಡಲು ಸಾಧ್ಯವಿಲ್ಲ. ಆಡಿದ ಮಾತು ತಪ್ಪುವುದು ನಮ್ಮ ಸಂಪ್ರದಾಯವಲ್ಲ."

ಸೈನ್ಯ ಜಮಾವಣೆ ಸಂಪೂರ್ಣವಾಯಿತು. ಒಂದು ಶುಭಮುಹೂರ್ತದಲ್ಲಿ ಕುಂಡಲಿನೀ ರಾಜ್ಯದ ಸೈನ್ಯ ಹಡಗನ್ನೇರಿತು. "ಹೊರಡಿ" ಎಂದು ಮಹಾರಾಜರು ಆಜ್ಞೆಯನ್ನು ಕೊಡುವ ವೇಳೆಗೆ ಸರಿಯಾಗಿ ದಕ್ಷಿಣ ದಿಕ್ಕಿನಲ್ಲಿ ವೇಗವಾಗಿ ಚಲಿಸುತ್ತಿದ್ದ ಪ್ರಕಾಶಮಾನವಾದ ಧೂಮಕೇತುವೊಂದು ಕಾಣಿಸಿತು. ನೋಡಿ ಎಲ್ಲರೂ ಭೀತಿಯಿಂದ ತಲ್ಲಣಿಸಿದರು. 'ಅಶುಭ, ಅಶುಭ' ಎಂಬ ಮಾತುಗಳು ಎಲ್ಲರ ಬಾಯಿಂದ ಅಪ್ರಯತ್ನವಾಗಿ ಹೊರಬಂತು.

"ಇದೇನು ವಿಪರೀತ? ಮತ್ತೊಂದು ಶುಭಮುಹೂರ್ತ ನೋಡಿಕೊಂಡು ಹೊರಡೋಣ. ಪ್ರಯಾಣ ಇಂದು ನಿಲ್ಲಿಸಿ" ಎಂದು ದೈವಜ್ಞನು ಹೇಳಿದ.

ಸೇನಾಧಿಪತಿಯು ಉರಿದುಬಿದ್ದು "ಯಾರಾದರೂ ನಕ್ಕುಬಿಟ್ಟಾರು. ಈ ಮೂಢ ನಂಬಿಕೆಗಳಿಗೆ ಮನಸೋತರೆ ಆದಂತೆಯೇ.." ಎಂದು ಆತನ ಮಾತನ್ನು ಧಿಕ್ಕರಿಸಿದ.

ಪರಿಪರಿ ವಿಧವಲ್ಲಿ ಹೇಳಿ ನೋಡಿದ ದೈವಜ್ಞ. ಲಾಭವಿಲ್ಲವಾಯಿತು. ಸೇನಾಧಿಪತಿಯ ಆಜ್ಞೆಯ ಮೇರೆಗೆ ಹಡಗಿನ ಪರದೆಗಳನ್ನು ಹರವಿದರು. ದಕ್ಷಿಣ ದಿಶೆಯಲ್ಲಿ ಕಂಡುಬಂದ ಧೂಮಕೇತುವಿನ ಕಡೆಯೇ ನೋಡುತ್ತಾ ಅದೇ ದಿಕ್ಕಿನಲ್ಲಿ ಹಡಗುಗಳೆಲ್ಲಾ ಗಬಗಬಾ ಮುಂದಕ್ಕೆ ಸಾಗಿದವು.

[ ಇನ್ನೂ ಇದೆ ]






ಇಂದ್ರನು ದೇವತೆಗಳ ಪ್ರಭು. ಆತನ ಸಾರಥಿ ಮಾತಲಿ. ಮಾತಲಿಗೆ ಗುಣಕೇಶಿ ಎಂಬ ಒಬ್ಬಳೇ ಮಗಳು. ಆಕೆ ಅಪೂರ್ವಸುಂದರಿ.

ಗುಣಕೇಶಿಗೆ ಯುಕ್ತವಯಸ್ಸು ಪ್ರಾಪ್ತವಾದ ಕೂಡಲೇ ಮಾತಲಿ ಆಕೆಯ ಮದುವೆಯ ವಿಷಯ ಆಲೋಚಿಸಿದ. ಮಗಳ ಮದುವೆ ತುಂಬಾ ಸಲೀಸಾಗಿ ಆಗುವಂತಹ ಕಾರ್ಯವಲ್ಲವೆಂದು ಆತನಿಗೆ ತಿಳಿದಿದೆ. ಏಕೆಂದರೆ ತಾನು ಇಂದ್ರನ ಸಾರಥಿಯಾದುದರಿಂದ ತನ್ನ ಅಂತಸ್ತಿಗೆ ತಕ್ಕ ಅಳಿಯನನ್ನು ಪಡೆಯಬೇಕೆಂದು ನಿರ್ಧರಿಸಿದ.

ಸ್ವರ್ಗ ಮತ್ತು ಮಾನವ ಲೋಕಗಳಲ್ಲಿ ಗುಣಕೇಶಿಗೆ ಗುಣ ಮತ್ತು ರೂಪದಲ್ಲಿ ತಕ್ಕವನಾದ ವರನಿಗಾಗಿ ಹುಡುಕಾಡಿದ. ಆದರೆ ಅಂತಹ ಯುವಕನ್ಯಾರೂ ಕಾಣಬರಲಿಲ್ಲ. ಬೇಸರವಾಯಿತು. ಬೇರೇನೂ ಮಾಡುವಂತಿಲ್ಲವೆಂದು ಸುಮ್ಮನೆ ಕುಳಿತುಬಿಟ್ಟ.

ಮಾತಲಿಯ ಹೆಂಡತಿ ಸುಧರ್ಮ. ಗಂಡನು ಈರೀತಿ ಉದಾಸೀನನಾದುದನ್ನು ಕಂಡು ಸಹಿಸಲಾರದಾದಳು. ಮಗಳಿಗೆ ವಯಸ್ಸು ಹೆಚ್ಚಾಗುತ್ತಿದೆ. "ಸ್ವರ್ಗ ಮತ್ತು ಭೂಲೋಕಗಳಲ್ಲಿ ಅನುಗುಣನಾದ ವರನು ಸಿಗದಮಾತ್ರಕ್ಕೆ ಬೇರೆ ಯಾವಲೋಕವೂ ಇಲ್ಲದಾಯಿತೆ? ಒಂದು ಬಾರಿ ನಾಗಲೋಕಕ್ಕೆ ಹೋಗಿ ಬರಬಾರದೆ?" ಎಂದಳು ಸುಧರ್ಮ.

"ಸರಿ" ಎಂದು ಮಾತಲಿ ನಾಗಲೋಕಕ್ಕೆ ಹೊರಟ. ಮಟಮಟ ಮಧ್ಯಾಹ್ನದ ಸಮಯ. ದಾರಿಯಲ್ಲಿ ನಾರದರು ಎದುರಾದರು.

"ಓಹೋ, ಇಂದ್ರನ ಸಾರಥಿ ಮಾತಲಿ ಇರುವಂತಿದೆಯಲ್ಲಾ" ಎಂದು ಮಾತನಾಡಿಸಿದರು. ಮಾತಲಿ ಮುಚ್ಚುಮರೆ ಯಿಲ್ಲದೆ ಎಲ್ಲವನ್ನೂ ವಿವರಿಸಿ ಹೇಳಿದ. ಅದನ್ನು ಕೇಳಿ ಬೆರಗಾದರು ನಾರದರು. "ಈಗ ನಾನು ವರುಣದೇವನಲ್ಲಿಗೆ ಹೋಗುತ್ತಿರುವೆನು. ಮಳೆಯಿಲ್ಲದೆ ಭೂಲೋಕದಲ್ಲಿ ಹಾಹಾಕಾರವೆದ್ದಿದೆ. ನೀನೂ ನನ್ನೊಂದಿಗೆ ಬಂದರೆ ಅಲ್ಲಿ ನಿನ್ನ ಮಗಳಿಗೆ ಯೋಗ್ಯನಾದ ವರನನ್ನು ಹುಡುಕಬಹುದು" ಎಂದರು ನಾರದರು.

ಎಚ್. ಭೀಮರಾವ್, ಹಾನಗಲ್ಲು.




ನಾರದರೊಂದಿಗೆ ಹೊರಟ ಮಾತಲಿ. ಇಬ್ಬರೂ ವರುಣದೇವನ ಹತ್ತಿರ ಹೋದರು. ವರುಣನು ನಾರದರ ಮುಖಾಂತರ ಭೂಲೋಕದ ಪ್ರಜೆಗಳ ಕಷ್ಟವನ್ನು ಅರಿತು, ಅವರ ಸಂಕಷ್ಟವನ್ನು ಪರಿಹರಿಸುವೆನೆಂದು ಅಭಯವಿತ್ತು, ಅವರನ್ನು ಕಳುಹಿಸಿ ಕೊಟ್ಟನು.

ಮಾತಲಿಗೆ ಅಲ್ಲಿ ಯಾರೂ ತನ್ನ ಮಗಳಿಗೆ ಯೋಗ್ಯನಾದ ವರನು ಕಾಣಿಸಲಿಲ್ಲ. ನಾರದರು ಮಾತಲಿಯನ್ನು ಅಲ್ಲಿಂದ ನೆಟ್ಟಗೆ ನಾಗಲೋಕಕ್ಕೆ ಕರೆದುಕೊಂಡು ಹೋದರು. ಅಲ್ಲಿನ ವಿಶೇಷ ಕೌತುಕಗಳನ್ನು ತೋರಿಸುತ್ತಾ ನಡೆದರು ನಾರದರು. ಮಾತಲಿಯನ್ನು ನಾಗಲೋಕದಲ್ಲಿದ್ದ ಗಣ್ಯಮಹನೀಯರಿಗೆಲ್ಲಾ ಪರಿಚಯಮಾಡಿಸಿ ಕೊಟ್ಟರು.

ಅಲ್ಲಿಂದ ಇಬ್ಬರೂ ದಾನವರ ಪಾತಾಳಕ್ಕೆ ಹೋದರು. ಪಾತಾಳಲೋಕದಲ್ಲಿ ವಿಶ್ವಕರ್ಮನು ಸ್ವತಃ ನಿರ್ಮಿಸಿದ ಹಿರಣ್ಯಪುರದ ಕನಕ ಮತ್ತು ರಜತ ಭವನಗಳನ್ನೂ, ರತ್ನ ಮತ್ತು ನೀಲಗಳನ್ನು ಹುದಿಗಿಸಿರುವ ಬಾಗಿಲು, ಮತ್ತು ಬಾಗಿಲುವಾಡಗಳನ್ನೂ ನೋಡಿ ಮಾತಲಿ ಆಶ್ಚರ್ಯ ಚಕಿತನಾದ.

"ನಿನ್ನ ಗುಣಕೇಶಿಗೆ ತಕ್ಕ ವರನು ಈ ಯುವಕರಲ್ಲಿ ಯಾರಾದರೂ ಇರುವರೇನೋ ನೋಡು!" ಎಂದರು ನಾರದರು ಒಂದು ಯುವಕರಗುಂಪನ್ನು ತೋರಿಸುತ್ತಾ. ಮಾತಲಿ ತಲೆತಗ್ಗಿಸಿ "ಇಲ್ಲಿ ಭವನ ಮತ್ತು ಬಾಗಿಲುಗಳ ಹೊರತು ನೋಡಬಹುದಾದುವೇನೂ ಇಲ್ಲ. ಆದರೂ ದಾನವರಿಗೆ ನಮ್ಮ ಮಗಳನ್ನು ಕೊಡುವುದಾದರೂ ಹೇಗೆ?" ಎಂದು ನುಡಿದ.

ಅಲ್ಲಿಂದ ನಾರದರು ಮಾತಲಿಯನ್ನು ವಾಸುಕಿ ಪರಿಪಾಲಿಸುವ ಭೋಗವತಿ ಪಟ್ಟಣಕ್ಕೆ ಕರೆದುಕೊಂಡು ಹೋದರು. ಅದು ಐಶ್ವರ್ಯದಲ್ಲಿ, ಸೊಬಗಿನಲ್ಲಿ ಇಂದ್ರನ ಅಮರಾವತಿ ಪಟ್ಟಣವನ್ನು ಸರಿಗಟ್ಟುತಿತ್ತು. ಅಲ್ಲಿದ್ದ ನಾಗಪ್ರಮುಖರನ್ನು ಮಾತಲಗೆ ನಾರದರು ಪರಿಚಯ ಮಾಡಿಕೊಟ್ಟರು.

"ಇಲ್ಲಿರುವವರೆಲ್ಲಾ ಧನವಂತರು ಮತ್ತು ಧೈರ್ಯವಂತರು. ವಾಸುಕಿ, ಕಾರ್ಕೋಟಕ, ಧನಂಜಯ, ತಕ್ಷಕ ಮುಂತಾದವರ ಹೆಸರನ್ನು ನೀನು ಕೇಳಿರಬಹುದು; ಇವರೆಲ್ಲಾ ಮಹಾ

ಮಹಿಮನಾದ ಕಶ್ಯಪನ ಸಂತಾನ. ನಿನ್ನ ಮಗಳಿಗೆ ಉಚಿತ ವರನು ಇಲ್ಲಿ ಸಿಕ್ಕಿದರೂ ಸಿಕ್ಕಬಹುದು" ಎಂದರು ನಾರದರು.

"ನಾರದರೇ, ನೀವು ಹೇಳಿದುದೆಲ್ಲಾ ಸರಿ. ಅದೋ ಅಲ್ಲಿ ಆ ಯುವಕರಲ್ಲಿ ನಮ್ಮ ಕಡೆಯೇ ನೋಡುತ್ತಾ ನಿಂತಿರುವ ಆ ಎತ್ತರವಾದ ಹುಡುಗನು ಯಾರು? ಅಂದಚಂದಗಳಲ್ಲಿ ನಮ್ಮ ಗುಣಕೇಶಿಗೆ ತಕ್ಕ ಜೊತೆಯಾಗಿದ್ದಾನೆ" ಎಂದ ಮಾತಲಿ. ನಾರದರು ಆ ಯುವಕನ ಕಡೆ ನೋಡಿ "ಮಾತಲೀ, ನಿನ್ನ ಕುಮಾರಿ ಗುಣಕೇಶಿ ಅದೃಷ್ಟವಂತಳು. ಆ ಯುವಕನೇ ಸುಮುಖ. ಆತನು ವಾಸುಕಿಗೂ, ಆರ್ಯಕನಿಗೂ ಮೊಮ್ಮಗನಾಗುತ್ತಾನೆ. ಆತನ ತಂದೆ ನಾಗಚಿಕುರ. ಪಾಪ, ಈ ಮಧ್ಯೆ ಆತನು ಗರುಡನಿಂದ ಮೃತಿಹೊಂದಿದನು" ಎಂದರು.

ಈ ಯುವಕನಿಗೆ ತನ್ನ ಮಗಳನ್ನು ಕೊಟ್ಟು ವಿವಾಹ ಮಾಡುವುದು ಶ್ರೇಯಸ್ಕರವೆಂದು ತೋರಿತು ಮಾತಲಿಗೆ. ಈ ಸಂಬಂಧವನ್ನು ಹೇಗಾದರೂ ಮಾಡಿ ಕುದುರಿಸಲೇಬೇಕೆಂದು ನಾರದರನ್ನು ಕೇಳಿಕೊಂಡ.

ಕೂಡಲೇ ನಾರದರು ಮಾತಲಿಯನ್ನು ಸುಮುಖನ ಅಜ್ಜನಾದ ಆರ್ಯಕನ ಹತ್ತಿರಕ್ಕೆ ಕರೆದುಕೊಂಡು ಹೋದರು. ಪರಿಚಯ, ಕುಶಲಪ್ರಶ್ನೆಗಳಾದ ತರುವಾಯ ನಾರದರು ಆರ್ಯಕನನ್ನು ಕುರಿತು: "ಇಂದ್ರನ ಸಾರಥಿಯಾದ ಮಾತಲಿ ನಿಮ್ಮೊಂದಿಗೆ ಸಂಬಂಧ ಬೆಳೆಸಬೇಕೆಂದು ಹಾತೊರೆಯುತ್ತಿದ್ದಾನೆ.




ಅವರಿಗೆ ಒಬ್ಬಳೇ ಮಗಳು. ಆಕೆಯನ್ನು ನಿಮ್ಮ ಮೊಮ್ಮಗನಿಗೆ ಕೊಟ್ಟು ವಿವಾಹ ಮಾಡಬೇಕೆಂದು ಅವರ ಅಭಿಲಾಷೆ" ಎಂದರು.

ನಾರದರ ಮಾತು ಕೇಳಿದ ಆರ್ಯಕನಿಗೆ ಆನಂದವೂ ದುಃಖವೂ ಒಮ್ಮೆಗೇ ಉಂಟಾಯಿತು. ದೇವತೆಗಳ ಪ್ರಭುವಾದ ಇಂದ್ರನ ಸಾರಥಿಯ ಮಗಳನ್ನು ತನ್ನ ಮೊಮ್ಮಗನಿಗೆ ತಂದುಕೊಳ್ಳುವುದಕ್ಕಿಂತಲೂ ಆರ್ಯಕನು ಬಯಸುವುದಾದರೂ ಏನಿದೆ? ಆದರೆ ಆತನು ಚಿಂತಾಕುಲನಾಗಿ ಹೀಗೆಂದ:

"ಮಾತಲಿಯ ಪುತ್ರಿಯನ್ನು ನಮ್ಮ ಮೊಮ್ಮಗನಿಗೆ ಮಾಡಿಕೊಳ್ಳುವಷ್ಟು ಅದೃಷ್ಟವಂತರೆಂದು ನಾನು ಭಾವಿಸಿರಲಿಲ್ಲ. ಆದರೆ ಈಗ ನಾವೆಲ್ಲಾ ತುಂಬಾ ಕಳವಳಪರಿಸ್ಥಿತಿ

ಯಲ್ಲಿದ್ದೇವೆ. ಸುಮುಖನ ತಂದೆಯನ್ನು ಕೊಂದ ಗರುಡನು ಮತ್ತೊಂದು ತಿಂಗಳಾಗುವ ಮುನ್ನ ಸುಮುಖನನ್ನೂ ಸಹ ಕೊಂದು ಭಕ್ಷಿಸುವೆನೆಂದು ಶಪಥಮಾಡಿದ್ದಾನೆ."

ಆರ್ಯಕನು ಹೇಳಿದ ಮಾತುಗಳನ್ನು ಕೇಳಿ, ನಾರದರೂ ಮಾತಲಿಯೂ ಗುಸುಗುಸು ಏನೋ ಮಾತನಾಡಿಕೊಂಡರು. ಸುಮುಖನೊಂದಿಗೆ ಅವರಿಬ್ಬರೂ ನೆಟ್ಟಗೆ ಇಂದ್ರನ ಹತ್ತಿರ ಬಂದರು. ಅನಿರೀಕ್ಷಿತವಾಗಿ ಮಹಾವಿಷ್ಣು ಸಹ ಅಲ್ಲೇ ಇದ್ದ.

ವಿಷ್ಣು ಮತ್ತು ಇಂದ್ರರಿಗೆ ಸುಮುಖನ ವೃತ್ತಾಂತ ಮತ್ತು ಗರುಡನ ಪ್ರತಿಜ್ಞೆ ಮೊದಲಾದುವನ್ನು ನಾರದರು ಹೇಳಿದರು. ದೇವಮುನಿಯ ಕೋರಿಕೆ, ಮಾತಲಿಯ ಪ್ರಾರ್ಥನೆಗಳನ್ನು ತಳ್ಳಿ ಹಾಕಲಾರದೆ ಮಹಾವಿಷ್ಣು ಕನಿಕರದಿಂದ "ದೇವೇಂದ್ರ, ಸುಮುಖನಿಗೆ ಅಮೃತ ಕೊಟ್ಟರೆ ಆತನಿಗೆ ಒದಗಿರುವ ಬಿಕ್ಕಟ್ಟು ಪರಿಹಾರವಾಗುವುದು" ಎಂದು ಸಲಹೆ ಕೊಟ್ಟನು. ಆದರೆ ಇಂದ್ರನು ಯೋಚನೆಗೆ ಬಿದ್ದನು. ಅವನು ಸುಮುಖನಿಗೆ ಅಮೃತವನ್ನು ಕೊಡಲು ಸಮ್ಮತಿಸಲಿಲ್ಲ. ಏಕೆಂದರೆ ಮಹಾ ಬಲಶಾಲಿಯೂ, ಮಹಾವಿಷ್ಣುವಿಗೆ ವಾಹನವೂ ಆದ ಗರುಡನ ಶಕ್ತಿಸಾಮರ್ಥ್ಯಗಳು ಇಂದ್ರನಿಗೆ ತಿಳಿಯದ ವಿಷಯವಲ್ಲ.

ಇಂದ್ರನು ಸಂಕೋಚಪಡುತ್ತಿರುವುದನ್ನು ಕಂಡು ಮಹಾವಿಷ್ಣು "ದೇವತೆಗಳ ಅಧಿಪತಿ ನೀನು. ಯಾರಿಗಾದರೂ ನೀನು ಸಂಪೂರ್ಣ ಆಯುಸ್ಸು ಪ್ರಸಾದಿಸಿದರೆ ಎದುರು ಬೀಳುವವರು ಯಾರು?" ಎಂದ.

ಮಹಾವಿಷ್ಣುವಿನ ಮಾತುಗಳ ಧರ್ಮಸೂಕ್ಷ್ಮವನ್ನು ಗ್ರಹಿಸಿದ ಇಂದ್ರನು ಸುಮುಖನನ್ನು ಕುರಿತು "ಚಿರಂಜೀವಿಯಾಗಿ ಬಾಳು" ಎಂದು ಆಶೀರ್ವಾದ ಮಾಡಿದ.

ಪರಮಾನಂದಭರಿತನಾದ ಮಾತಲಿ, ನಾರದ ಮತ್ತು ಸುಮುಖರು ಆ ದೇವತೆಗಳಿಗೆ ಪ್ರಣಾಮಮಾಡಿ ಅವರಿಂದ ಅಪ್ಪಣೆ ಪಡೆದು ಅಲ್ಲಿಂದ ಹೊರಟರು.

ಆ ತರುವಾಯ ಕೆಲವು ದಿನಗಳಾದಮೇಲೆ ಗುಣಕೇಶಿಗೂ ಸುಮುಖನಿಗೂ ವಿವಾಹವು ಅತಿ ವೈಭವವಾಗಿ ನಡೆಯಿತು.



# ಹಜಾಮನಿಗಿಂತ ಕಡೆ

ಒಂದು ಆಫೀಸಿನ ಅಕೌಂಟೆಂಟರೊಬ್ಬರು ಅವಸರವಸರವಾಗಿ ಹಜಾಮನ ಷಾಪಿಗೆ ಹೊಕ್ಕರು. ಆಫೀಸಿಗೆ ಆಗಲೇ ಹೊತ್ತಾಗಿತ್ತು. ಕುರುಚಲು ಗಡ್ಡ ಬೋಳಿಸದೆ ಆಫೀಸಿಗೆ ಹೋದರೆ ಸಹೋದ್ಯೋಗಿಗಳು ತಮಾಷೆ ಮಾಡತ್ತಾರೆಂಬ ಭಯ. ಮೊನ್ನೆಯೇ ಕ್ಷೌರ ಮಾಡಿಸಿಕೊಳ್ಳಬೇಕಿತ್ತು; ಆಗಲಿಲ್ಲ.

ಕೋಟನ್ನು ಕಳಚಿ ಸ್ಟ್ಯಾಂಡಿಗೆ ತಗಲಹಾಕಿ, ಬೇಗಬೆಗನೇ ಷೇವಿಂಗ್ ಮಾಡಿಸಿಕೊಂಡರು. ಮುಗಿಯುತ್ತಲೇ ಕೈಯಲ್ಲೇ ಇಟ್ಟುಕೊಂಡಿದ್ದ ದುಡ್ಡನ್ನು ಅವನ ಟೇಬಿಲ್ ಮೇಲೆ ಇಟ್ಟು, ಕೋಟು ಹಾಕಿಕೊಂಡು ಬೇಗಬೇಗನೆ ಆಫೀಸಿಗೆ ಓಡಿದರು. ಆದಿನ ಸಂಬಳ ಬಟವಾಡೆ. ಗುಮಾಸ್ತರೂ, ಪಿಯೋನ್‌ಗಳೂ ಸಂಬಳಕ್ಕಾಗಿ ಅವರ ಬರುವಿಕೆಯನ್ನೆ ಕಾದಿದ್ದರು.

"ಸೈನ ಹಾಕ್ರೋ ಇಲ್ಲಿ. ನಿಮ್ಮ ಸಂಬಳ ತೆಗೆದುಕೊಂಡದ್ದಕ್ಕೆ" ಎನ್ನುತ್ತಾ ಅಕೌಂಟೆಂಟರು ತಮ್ಮ ಜೇಬಿಗೆ ಕೈಹಾಕಿದರು ಕನ್ನಡಕ ತೆಗೆಯಲಿಕ್ಕಾಗಿ. ಆದರೆ ಆ ಜೇಬಿನಿಂದ ಬಂದದ್ದು ಕ್ಷೌರದ ಕತ್ತಿ, ಪಕ್ಕದ ಜೇಬಿನಿಂದ ಹೊರಟಿತೊಂದು ಬಾಚಣಿಗೆ, ಮಸೆಯೋ ಕಲ್ಲು ಇತ್ಯಾದಿ!

ಪಾಪ, ಅಕೌಂಟೆಂಟರು ಮತ್ತೆ ಓಡಿದರು ಆ ಕ್ಷೌರದ ಷಾಪಿಗೆ. ತಮ್ಮ ಈ ಹಜಾಮತಿಯನ್ನು ಆಫೀಸಿನಲ್ಲಿ ತೋರಿಸುವುದಕ್ಕಿಂತ, ಕುಚ್ಚು ಗಡ್ಡದೊಂದಿಗೆ ಬಂದಿದ್ದರೇ ಚೆನ್ನಾಗಿತ್ತೆನಿಸಿತು ಅವರಿಗೆ.

ಅಲ್ಲಿ ಹಜಾಮನೂ ಇವರದಾರೀ ಕಾಯುತ್ತಿದ್ದ. ಇವರನ್ನು ಕಾಣುತ್ತಲೇ "ಸ್ವಾಮಿ, ತಮ್ಮ ಕೋಟು ಬದಲಾಗಿದೆ" ಎಂದ. ಅಕೌಂಟೆಂಟರು ತಮ್ಮ ಕೋಟನ್ನು ತೆಗೆದುಕೊಂಡು ಅದರಲ್ಲಿದ್ದ ದುಡ್ಡನ್ನು ಎಣಿಸಿಕೊಂಡರು. ಸರಿಯಾಗಿತ್ತು. ಹಜಾಮನೂ ತನ್ನ ಕೋಟಿನ ಕಿರಿಜೋಬಿಗೆ ಕೈಹಾಕಿ, ಅದರಲ್ಲಿದ್ದ ೨೫೦ ರೂಪಾಯಿಗಳು ಭದ್ರವಾಗಿರುವುದಕ್ಕೆ ಅಕೌಂಟೆಂಟರಿಗೆ ಕೃತಜ್ಞತೆ ಹೇಳಿದ.

ಅಕೌಂಟೆಂಟ್ ತಿರುಗಿ ಬರುತ್ತಾ ತನ್ನಲ್ಲಿ—"ನನ್ನ ಕೋಟು ಬದಲಾದ ಗಾಬರಿಯಲ್ಲಿ ಆ ಕೋಟಿನ ಎಲ್ಲಾ ಜೇಬನ್ನೂ ನೋಡದೆಹೋದೆ. ಮೊದಲೇ ಗೊತ್ತಾಗಿದ್ದಿದ್ದರೆ ಇನ್ನೂರೈವತ್ತು ರೂಪಾಯಿಯೂ, ದಿನಾಬೇಕಾಗುವ ಆ ಸಾಮಾನುಗಳೂ ನನಗೇ ದಕ್ಕುತ್ತಿದ್ದುವು" ಎಂದುಕೊಂಡರು. ಆಗ ಹೃದಯದಲ್ಲಿ ಇನ್ನೊಂದುದನಿ "ಅಯ್ಯೋ! ನೀನು ಹಜಾಮನಿಗಿಂತ ಕಡೆ" ಎಂದಿತು.

—ಎಂ. ಎಚ್. ಶಂಕರನಾರಾಯಣ.







# ಇಲಿದಂಪತಿಗಳ ಕಲಹ

ಬೇಗನೆ ಎದ್ದಳು ಹೆಣ್ಣಿಲಿಯಮ್ಮ
ತನ್ನ ಕೆಲಸಗಳ ಸರಸರ ಮಾಡಿ
ಮರಿಗಳಿಗೆಲ್ಲಾ ಅದು ಇದು ನೀಡಿ
ಗಂಡನಿಗೆಲ್ಲಾ ಸಿದ್ಧವ ಮಾಡಿ

ಅವನೆದ್ದು ಬರುವ ದಾರಿಯ ನೋಡಿ
ಎಷ್ಟೊತ್ತಾದರು ಏಳದೆ ಹೋಗಲು
'ಎಂಥ ನಿದ್ದೆಯೋ ಇವನಿಗೆ' ಎಂದಳು.
ಮೆಲ್ಲನೆ ಇಲಿರಾಯನ ಬಳಿ ಬಂದಳು.

ಇನ್ನೂ ಗೊರಕೆಯಲೇ ಅವನಿದ್ದ.
"ಏನೋ ಪತಿರಾಯಾ, ಇಲಿರಾಯಾ!
ಇನ್ನೂ ಮಲಗಿದ್ದರೆ ಹೇಗಯ್ಯಾ?
ಸಂಸಾರವು ಸಾಗೋದೆಂತಯ್ಯಾ?

ಮನುಜರೆಲ್ಲರೂ ಮಲಗಿದ್ದಾಯ್ತು,
ಬೆಕ್ಕು ಚಳಿಗೆ ಒಲೆಬಳಿ ಸೇರ್ರ್ಯಾಯ್ತು.
ಹೆಗ್ಗಣ ರಾಜರು ತಿರುಗಾಡ್ತಾರೆ.
ಎಲ್ಲಾ ಅವರೇ ತಿಂದ್ಹಾಕ್ತಾರೆ

ಮತ್ತೆ ನಮಗೆ ಸಿಕ್ಕುವುದೇನುಂಟು?
ಬೇಗನೆದ್ದು ತಾ ತಿಂಡಿಯ ಗಂಟು."
ಎಂದು ಮುಸುಕೆಳೆದು ಗಂಡನ ಎಬ್ಬಿಸಿ
ಅವಸರಗೈದಳು ಇಲಿಯಮ್ಮ.

ಎದ್ದು ಸಿಟ್ಟಿನಿಂ ಮೊದ್ದಿಲಿರಾಯ,
"ಛೀಂ ಛೀಂ" ಎಂದು ಚೀರಿದನು.

" ಶ್ರೀ ರಾ ಮ "

" ಎಂಥ ರಗಳೆ ಇಲಿವೆಣ್ಣೇ ನಿನ್ನದು
ಹೊರಗೆ ತಿರುಗಿ ಬಲು ದಣಿದಿರು ವೆನಗೆ

ಕೊಂಚ ನಿದ್ದೆಯೂ ಮಾಡಲು ಬಿಡದು,
ಬಲ್ಲೆ ಹೋಗೆಂ''ದು ಮತ್ತೂ ಮಲಗಿದ.
' ಮಾಡುವೆ ನೀತಗೆ ' ಎಂದಿಲಿಯಮ್ಮ
ತಿಂಡಿ ತಿನಸುಗಳ ನೆಲ್ಲಾ ಅಡಗಿಸಿ

ಸುಮ್ಮನೆ ಕುಳಿತಳು ಮೂಲೆಯಲಿ.
ನಟ್ಟಿರುಳೆಲ್ಲಾ ಸಾಗಿದ ಮೇಲೆ
ನಿಟ್ಟಿಕೆ ಮುರಿದೆದ್ದನು ಇಲಿರಾಯ
" ಹೊಟ್ಟೆಗೆ ತಾರೇ !" ಎಂದರಚಿದನು

" ಇಟ್ಟಿರ ಲೇನಿಲ್ಲೆ ''ಂದಳು ಮಡದಿ.
ಸಿಟ್ಟುಬಂದಿ ತಿಲಿರಾಯನಿಗೆ,
ಹೊಟ್ಟೆಯ ಹಸಿವೂ ಸಿಟ್ಟೂ ಸೇರಿ,
ಪೆಟ್ಟು ಕೊಟ್ಟ ಹೆಂಡತಿ ಮಕ್ಕಳಿಗೆ,

ಎಲ್ಲರು ಒಟ್ಟಿಗೆ " ಛೀಂ ಛೀಂ ಛೀಂ ಛೀಂ''
ಕಲ್ಲೋಲವು ಹಿರಿದಾಯ್ತಲ್ಲಿ!
ಕೋಪ ತಣಿದು ತಾ ತಿಂಡಿಯ ತರಲು,
ಹೊರಟನು ಹೊರಗೆ, ಅದೇನಲ್ಲಿ !—

ಇಲಿಗಳ ' ಛೀಂ ಛೀಂ ' ಕಾರವಕೇಳಿ
ಬೆಕ್ಕು ಎದ್ದು ಆ ಬಿಲದ ಬಾಗಿಲಲಿ
ಹೊಂಚುತಿತ್ತು—ಇಲಿರಾಯ ಹೆದರಿದ !
ಹೋಗದೆ ಉಪವಾಸವೆ ಬಿದ್ದ !










# ಏಕಪಾಠಿ

ಸುಮಾರು ಸಾವಿರದ ಇನ್ನೂರು ವರ್ಷಗಳ ಹಿಂದೆ ಮಲೆಯಾಳ ದೇಶದಲ್ಲಿ ರಾಮಾನುಜಂ ಎಂಬ ಗಾಣಿಗರ ಹುಡುಗನೊಬ್ಬನಿದ್ದನು. ಅವನು ಬಾಲ್ಯದಿಂದಲೂ 'ಕುಶಾಗ್ರ ಬುದ್ಧಿ' ಎಂದು ಹೆಸರು ಪಡೆದಿದ್ದ. ಕುಶಾಗ್ರಬುದ್ಧಿ ಎಂದರೆ ದರ್ಭೆಯ ಅಂಚಿನಂತೆ ಚುರುಕುಬುದ್ಧಿ ಯವನೆಂದು ಅರ್ಥ. ಆದುದರಿಂದಲೇ ಆತನಿಗೆ ಯಾವ ಸೂಕ್ತವಾದರೂ, ಶ್ಲೋಕವಾದರೂ ಒಮ್ಮೆ ಹೇಳಿದ ಮಾತ್ರಕ್ಕೆ ಕಂಠಪಾಠವಾಗಿ ಬಿಡುತ್ತಿತ್ತು. ಒಂದುಸಾರಿ ಕೇಳಿ ಗ್ರಹಿಸಿದಾತ ನನ್ನು ಏಕಪಾಠಿ ಎನ್ನುವರು. ರಾಮಾನುಜಂ ಏಕಪಾಠಿ ಎಂದು ಪ್ರಸಿದ್ಧನಾದ.

ಆತನಿಗೆ ನಮ್ಮ ದೇಶದ ಉತ್ತಮ ಗ್ರಂಥ ಗಳಲ್ಲಿರುವ ವಿಷಯಗಳನ್ನೆಲ್ಲಾ ತಿಳಿದು ಕೊಳ್ಳುವ ಅಭಿಲಾಷೆ ಉಂಟಾಯಿತು. ನಮ್ಮಲ್ಲಿ ನಾಲ್ಕು ವೇದಗಳೂ, ಆರು ಶಾಸ್ತ್ರಗಳೂ, ಹದಿನೆಂಟು ಪುರಾಣಗಳೂ ಇವೆ. ಇವುಗಳಲ್ಲಿ ರುವ ತಿರುಳನ್ನೆಲ್ಲಾ ತಿಳಿಯುವ ಹಂಬಲ ವುಂಟಾಯಿತು ರಾಮಾನುಜಂಗೆ.

ಆದರೆ ರಾಮಾನುಜಂಗೆ ಯಾರೂ ವೇದ ಹೇಳಿಕೊಡುವವರಿಲ್ಲ. ಆ ಕಾಲದಲ್ಲಿ ವೇದ ಮತ್ತು ಶಾಸ್ತ್ರಗಳನ್ನು ಬ್ರಾಹ್ಮಣರು ಮಾತ್ರ ಕಲಿಯುತ್ತಿದ್ದರು. ಅನ್ಯರಿಗೆ ಅವುಗಳನ್ನು ತಿಳಿದುಕೊಳ್ಳಲೂ ಸಹ ಅವಕಾಶವಿರಲಿಲ್ಲ.

ರಾಮಾನುಜಂಗೆ ಬುದ್ಧಿ ಶಕ್ತಿ ಮತ್ತು ಆಸಕ್ತಿ ಗಳಿದ್ದರೂ ಕೂಡಾ ಗುರುಗಳ ಹತ್ತಿರ ಹೋಗಿ 'ನನಗೆ ಹೇಳಿಕೊಡಿ' ಎಂದು ಕೇಳುವಷ್ಟು ಧೈರ್ಯವಿರಲಿಲ್ಲ. ಏಕೆಂದರೆ ಅವರನ್ನು ಕೇಳಿ ಪ್ರಯೋಜನವಿಲ್ಲವೆಂದು ಆತನಿಗೆ ತಿಳಿದಿತ್ತು.

ವಿರಾಮವಿಲ್ಲದಿದ್ದರೂಸಹ ರಾಮಾನುಜಂಗೆ ವೇದಶಾಸ್ತ್ರಗಳ ಮೇಲಿನ ಆಸಕ್ತಿ ಕಡಿಮೆ ಯಾಗಲಿಲ್ಲ. ಬ್ರಾಹ್ಮಣ ಪಂಡಿತರೊಬ್ಬರು ತನ್ನ ಶಿಷ್ಯರಿಗೆ ಸೂಕ್ತ ಹೇಳಿಕೊಡುತ್ತಿರು ವಾಗ ಸ್ವಲ್ಪ ದೂರದಲ್ಲಿ ನಿಂತು ಕೇಳುವನು. ಆತನು ಏಕಪಾಠಿಯಾದುದರಿಂದ ಒಂದುಸಾರಿ ಕೇಳಿದ ಮಾತ್ರಕ್ಕೆ ಆತನಿಗೆ ಕಂಠಪಾಠವಾಗು ತಿತ್ತು. ಈ ರೀತಿಯಾಗಿ ರಾಮಾನುಜಂ ಪಾಂ ಡಿತ್ಯವನ್ನು ಲೀಲಾಜಾಲವಾಗಿ ಸಂಪಾದಿಸಿ

ಎಸ್. ಗೋಪಾಲ, ಮದ್ರಾಸು.

ಕೊಂಡ. ಆದರೂ ರಾಮಾನುಜಂಗೆ ಏನೂ ಗರ್ವವಿರಲಿಲ್ಲ. ಗಾಣ ಆಡಿಸಿ ಎಣ್ಣೆ ತೆಗೆದು ವಿಕ್ರಯಿಸುತ್ತಿದ್ದ. ಒಂದುದಿನ ಬೆಳಗ್ಗೆ ಆತನು ಎಳ್ಳನ್ನು ತೊಳೆದು ಶುಭ್ರಮಾಡಲು ಭಾವಿಯ ಕಡೆ ಹೋಗುತ್ತಿರಲು ದಾರಿಯಲ್ಲಿ ಬ್ರಾಹ್ಮಣ ಬಾಲಕನೊಬ್ಬನು ಜಗುಲಿಯಮೇಲೆ ಕುಳಿತು ಕೊಂಡು ಋಗ್ವೇದದ ಒಂದು ಸೂಕ್ತವನ್ನು ಓದುತ್ತಿದ್ದ. ಹಾಗೆ ಅವನು ಓದುವಾಗ ಸ್ವಲ್ಪ ತಪ್ಪಾಯಿತು. ಹೋಗುತ್ತಿದ್ದ ರಾಮಾನುಜಂ ಸುಮ್ಮನಿರಲಾರದೆ ಆ ತಪ್ಪನ್ನು ತಿದ್ದಿದ.

ಅದನ್ನು ಕೇಳಿದ ಆ ಬಾಲಕನ ತಂದೆ ಒಳಗಿನಿಂದ ಬಂದು ರಾಮಾನುಜನನ್ನು ನೋಡಿ ಚಕಿತನಾಗಿ "ಹೈದಾ, ನಮ್ಮ ಬಾಲಕನ ತಪ್ಪು ತಿದ್ದಿದುದು ನೀನೇ?" ಎಂದು ಕೇಳಿದ. ತನ್ನ ರಹಸ್ಯ ಬಯಲಾದುದಕ್ಕೆ ರಾಮಾನುಜನು ಬೆದರಿ "ಹೌದು ಮಹಾ ಸ್ವಾಮಿ" ಎಂದ ವಿನಯದಿಂದ.

"ವೇದಗಳನ್ನು ಕಲಿಯುವ ಅರ್ಹತೆಯಿಲ್ಲವಲ್ಲಾ ನಿನಗೆ" ಎಂದನಾ ಬ್ರಾಹ್ಮಣ.

"ನನಗೆ ಯಾರೂ ಹೇಳಿಕೊಡಲಿಲ್ಲ. ನಾನೇ ಕೇಳಿ ಕಲಿತುಕೊಂಡೆ" ಎಂದ ರಾಮಾನುಜಂ.

ಬ್ರಾಹ್ಮಣನು ನಂಬಲಿಲ್ಲ. ಸಂಶಯ ನಿವಾರಣೆ ಹೊಂದಲು "ಎಲ್ಲಿ ನೀನು ಕಲಿತಿರುವುದನ್ನು ಹೇಳು ನೋಡುವಾ" ಎಂದ.

ಸ್ವರತಪ್ಪದೆ, ಉಚ್ಚಾರಣೆಯ ದೋಷವಿಲ್ಲದೆ ನಾಲ್ಕು ವೇದಗಳನ್ನೂ ಆಮೂಲಾಗ್ರ




ವಾಗಿ ಒಪ್ಪಿಸಿದ ರಾಮಾನುಜಂ. ಅಗ್ರಹಾರದಲ್ಲಿದ್ದ ನಂಬೂದ್ರಿ ಬ್ರಾಹ್ಮಣರು ಆತನ ಸುತ್ತಲೂ ಸೇರಿ ಅದನ್ನು ಕೇಳಿ ನಿರ್ಘಾಂತರಾಗಿ "ಶಹಬಾಷ್" ಎಂದು ಅವನನ್ನು ಮೆಚ್ಚಿಕೊಂಡರು. ಈ ಮೆಚ್ಚುಗೆ ಕ್ರಮೇಣ ಅಸೂಯೆಯಾಗಿ ಬದಲಾಯಿಸಿತು.

ಆಶ್ರಮದ ಪಂಡಿತರೆಲ್ಲಾ ಸೇರಿ ಆ ಬಾಲಕನ ಮೇಲೆ ಸಂಚು ಹೂಡಿದರು. ಬುದ್ಧಿ ಮಂದವಾಗುವ ಚೂರ್ಣವನ್ನು ತಂದು ಅದನ್ನು ಪಾಯಸದಲ್ಲಿಬೆರಸಿ ರಾಮಾನುಜಂಗೆ ಕೊಟ್ಟು ಈ ರೀತಿ ನುಡಿದರು: "ಈ ಭಗವತ್ಪ್ರಸಾದವನ್ನು ಶೂದ್ರರಿಗೆ ಕೊಡಬಾರದು. ಆದರೆ ನೀನು ಪಂಡಿತನೆಂಬ ಅಭಿಮಾನದಿಂದ ನಿನಗೆ ಮಾತ್ರ ನಾವು ಕೊಡುತ್ತಿದ್ದೇವೆ. ಈ ವಿಷಯ




ಯಾರೊಂದಿಗೂ ಹೇಳಬೇಡ” ಇದನ್ನು ಕೇಳಿ ರಾಮಾನುಜಂ ಈ ಮಹಾಭಾಗ್ಯ ಒದಗಿದುದಕ್ಕೆ ಸಂತೋಷಗೊಂಡು, ಆ ಪಾಯಸವನ್ನು ಕೂಡಲೇ ಕುಡಿದುಬಿಟ್ಟ.

ಅದೇ ಗ್ರಾಮದಲ್ಲಿ ನಾರಾಯಣ ಭಟ್ಟಾದ್ರಿ ಎಂಬ ಬ್ರಾಹ್ಮಣ ವಿದ್ಯಾರ್ಥಿಯಿದ್ದ. ಆತನಿಗೆ ರಾಮಾನುಜಂ ಅಂದರೆ ತುಂಬಾ ಗೌರವ. ರಾಮಾನುಜನ ಗೆಳೆತನ ಬೆಳೆಸಿ ಅಡಿಗಡಿಗೆ ಆತನ ಗಾಣದ ಹತ್ತಿರಕ್ಕೆ ಬರುತ್ತಿದ್ದನು.

ಪ್ರಸಾದವೆಂದು ವಿಷವನ್ನು ತಿಂದ ರಾಮಾನುಜಂಹತ್ತಿರ ನಾರಾಯಣನು ಮಾರನೇಯ ದಿನ ಬೆಳಗ್ಗೆ ಹೋಗಿ ಮಾತನಾಡಿಸಿದ. ಎಷ್ಟೇ ಪ್ರಯತ್ನ ಮಾಡಿದರೂ ರಾಮಾನುಜಂ ಬಾಯಿಂದ ಮಾತೇ ಬರಲೊಲ್ಲದು. ಅಷ್ಟೇ ಅಲ್ಲ. ಹುಚ್ಚನಂತೆ ಎಲ್ಲೋ ದಿಕ್ಕುದಿಕ್ಕು ನೋಡುತ್ತಾ ಕುಳಿತಿದ್ದ. ರಾಮಾನುಜಂಗೆ ಬ್ರಾಹ್ಮಣರಿಂದ ಏನೋ ಅಪಚಾರ ನಡೆಯಿತೆಂದು ನಾರಾಯಣನು ಕೂಡಲೇ ಗ್ರಹಿಸಿ ತತ್ ಕ್ಷಣ ವೈದ್ಯನನ್ನು ಕರೆದುಕೊಂಡು ಬಂದ.

ವೈದ್ಯನು ಆ ವಿಷ ನಿವಾರಿಸುವ ಔಷಧಿಯನ್ನು ಬೆಣ್ಣೆಯಲ್ಲಿ ಕಲೆಸಿ ರಾಮಾನುಜನಿಗೆ ತಿನ್ನಿಸಿದ. ಕಟ್ಟಿಹೋಗಿದ್ದ ಬಾಯಿ, ಮಂದವಾಗಿದ್ದ ಬುದ್ಧಿ ಕ್ರಮೇಣ ಸುಧಾರಿಸಿ, ಸ್ವಲ್ಪ ಕಾಲದಲ್ಲೇ ಆತನಿಗೆ ಸೂಕ್ತ ಮತ್ತು ಶ್ಲೋಕಗಳು ಜ್ಞಾಪಕಕ್ಕೆ ಬಂದವು.

ಭಟ್ಟಾದ್ರಿ ಮತ್ತು ರಾಮಾನುಜರಲ್ಲಿ ಗೆಳೆತನ ಮತ್ತಷ್ಟು ದೃಢವಾಯಿತು. ನಾರಾಯಣನೂಸಹ ಒಬ್ಬ ಪಂಡಿತ; ಕವಿ. ಆದರಾತನು ರಾಮಾನುಜಂ ಅಷ್ಟು ಮೇಧಾವಿಯಲ್ಲ. ರಾಮಾನುಜಂ ಸಹಾಯದಿಂದ ಆತನು ಎಷ್ಟೋ ಸಂದೇಹಗಳನ್ನು ನಿವಾರಿಸಿಕೊಂಡು ತನ್ನ ಪಾಂಡಿತ್ಯವನ್ನು ವೃದ್ಧಿಪಡಿಸಿಕೊಂಡ.

ಆ ಕಾಲದಲ್ಲಿ ಪಂಡಿತರು ಒಗಟುರೂಪದಲ್ಲಿ ಮಾತನಾಡುತ್ತಿದ್ದರು. ಚೆನ್ನಾಗಿ ಆಲೋಚಿಸಿದ ಹೊರತು ಮಾತುಗಳ ಅರ್ಥ ತಿಳಿಯುತ್ತಿರಲಿಲ್ಲ. ಒಂದು ದಿನ ನಾರಾಯಣನು “ನಿನ್ನ ಗಾಣದಲ್ಲಿ ತಯಾರಾಗುವ ಎಣ್ಣೆ ಶ್ರೇಷ್ಠವಾದುದೇ?” ಎಂದು ಕೇಳಿದ. ರಾಮಾನುಜಂ ನಗುತ್ತಾ ‘ನನ್ನ ಹತ್ತಿರವಿರುವ ತೈಲ ಹತ್ತು ಬೀಜಗಳ ಸಾರ. ಇದಕ್ಕಿಂತಲೂ ಶ್ರೇಷ್ಠವಾದ ಎಣ್ಣೆ ಇನ್ನೆ

ಲ್ಲಿಯೂ ನಿನಗೆ ಲಭಿಸುವುದಿಲ್ಲ' ಎಂದು ನುಡಿದ. ನಾರಾಯಣನಿಗೆ ಆ ಮಾತುಗಳಭಾವ ವೇನೋ ಎಷ್ಟು ಆಲೋಚಿಸಿದರೂ ತಿಳಿಯ ಲಿಲ್ಲ. ಕೊನೆಗೆ ಆತನು ತನ್ನ ಇಷ್ಟದೇವರಾದ ವಿಷ್ಣುವನ್ನು ನೆನೆಸಿಕೊಂಡು ನಿದ್ದೆಹೋದ. ಆತನಿಗೆ ಕನಸಿನಲ್ಲಿ ಮಹಾವಿಷ್ಣು ಕಾಣಿಸಲು, ಆತನು ಭಗವಂತನನ್ನು ಕುರಿತು "ರಾಮಾ ನುಜಂ ಹೇಳಿದ ಆ ಹತ್ತು ಬೀಜಗಳೆಂದ ರೇನು?" ಎಂದು ಕೇಳಿದ. ಅದಕ್ಕೆ ಆ ದೇವ ದೇವನು "ರಾಮಾನುಜಂ ಹತ್ತಿರ ನಾಲ್ಕು ವೇದಗಳೂ, ಆರು ಶಾಸ್ತ್ರಗಳೂ ಇವೆ. ಇವೇ ಆ ಹತ್ತು ಬೀಜಗಳು. ಇವುಗಳ ಸಾರವಾದ ಜ್ಞಾನವೇ ಪ್ರಜೆಗಳಿಗೆ ಆತನ ಹತ್ತಿರದಿಂದ ಲಭಿಸುವ ಎಣ್ಣೆ. ಆ ತೈಲವನ್ನು ಶೀಘ್ರವಾಗಿ ಸಿದ್ಧಪಡಿಸಿ ಪ್ರಜೆಗಳಿಗೆ ಕೊಡುವಂತೆ ಹೇಳು" ಎಂದು ಅಂತರ್ಧಾನವಾದ.

ಎಚ್ಚರಿಕೆಯಾದ ಕೂಡಲೇ ನಾರಾಯಣನು ಎದ್ದು ಹೋಗಿ ರಾಮಾನುಜನನ್ನು ಎಬ್ಬಿಸಿ ತನ್ನ ಕನಸಿನ ಸಂಗತಿ ತಿಳಿಸಿದ. ರಾಮಾ ನುಜಂ ಆನಂದಗೊಂಡು ನಾರಾಯಣನನ್ನು ಅಪ್ಪಿ "ನಿನ್ನ ಮೂಲಕ ನನ್ನ ಜನ್ಮ ಪಾವನ ವಾಯಿತು. ಭಗವಂತನ ಆಜ್ಞಾನುಸಾರವಾಗಿ ವೇದಶಾಸ್ತ್ರಸಾರವನ್ನು ಪ್ರಜೆಗಳಿಗೆ ಸಿಗುವಂತೆ ಮಾಡುವೆನು" ಎಂದ.

ವೇದಶಾಸ್ತ್ರಸಾರವೆಂದರೆ ಪುರಾಣಗಳು ಅಂತ ಅರ್ಥ. ಆ ಪುರಾಣಗಳನ್ನು ವೇದ ವ್ಯಾಸರು ಸಂಸ್ಕೃತದಲ್ಲಿ ಬರೆದಿದ್ದಾರೆ. ಆದರೆ




ಅದು ಸಂಸ್ಕೃತ ಪಂಡಿತರಿಗೆ ಹೊರತು ಜನ ಸಾಮಾನ್ಯರಿಗೆ ಅರ್ಥವಾಗದು. ಆದುದರಿಂದ ರಾಮಾನುಜಂ ಭಾರತ, ಭಾಗವತ, ರಾಮಾ ಯಣಗಳನ್ನು ಎಲ್ಲರಿಗೂ ಅರ್ಥವಾಗುವಂತೆ ಮಲೆಯಾಳಿ ಭಾಷೆಯಲ್ಲಿ ರಚಿಸಿದನು.

ಈ ರಚನೆ ನಡೆಯುತ್ತಿರುವಾಗ ನಾರಾ ಯಣಭಟ್ಟಾದ್ರಿ ಹಾಸಿಗೆಹಿಡಿದ. ಒಂದು ದಿನ ರಾಮಾನುಜಂ ಆತನನ್ನು ನೋಡಲು ಹೋಗಿ "ಏನು ಔಷಧಿ ತೆಗೆದುಕೊಳ್ಳುತ್ತಿರುವೆ?" ಎಂದು ಕೇಳಿದ. "ಎಲ್ಲ ಔಷಧಿಗಳೂ ಆದವು. ಯಾವುದರಿಂದಲೂ ಗುಣ ಕಾಣಬರಲಿಲ್ಲ" ಎಂದ ನಾರಾಯಣ. "ಹಾಗಾದಪಕ್ಷಕ್ಕೆ ಮೀನಿನಿಂದ ಪ್ರಾರಂಭಿಸು" ಎಂದು ಹೇಳಿ ಮನೆಗೆ ಹಿಂತಿರುಗಿದ ರಾಮಾನುಜಂ.

ನಾರಾಯಣನಿಗೆ ರಾಮಾನುಜಂ ಮಾತು ಕೇಳಿ ಬಹಳ ಕೋಪ ಬಂತು. "ನಾನು ಮೀನು ತಿನ್ನಬೇಕೆಂದು ಸಲಹೆ ಕೊಡುತ್ತಿದ್ದಾನಲ್ಲಾ ಇವನು" ಎಂದುಕೊಂಡ ಮನಸ್ಸಿನಲ್ಲಿ. ತನ್ನನ್ನು ನೋಡಲು ಬಂದುಹೋಗುತ್ತಿದ್ದ ರಾಮಾನುಜನೊಂದಿಗೆ ಮೊದಲಿನಂತೆ ಮನಸ್ಸು ಕೊಟ್ಟು ಮಾತನಾಡುವುದನ್ನೂ ನಿಲ್ಲಿಸಿ ಒಂದು ರೀತಿಯಾಗಿದ್ದ.

ರಾಮಾನುಜಂ ಇದನ್ನು ಗ್ರಹಿಸಿ "ತಮ್ಮಾ, ನಾನೇನಾದರೂ ನಿನ್ನ ಮನಸ್ಸಿಗೆ ನೋವುಂಟಾಗುವಂತಹ ಮಾತನ್ನಾಡಿರುವೆನೇ? ಮರೆಮಾಡದೆ ಹೇಳು" ಎಂದು ಒತ್ತಾಯಪಡಿಸಿದ. ಆಗ ನಾರಾಯಣನು ಮೀನಿನ ವೈದ್ಯವನ್ನು ಕುರಿತು ಹೇಳಿದ.

ರಾಮಾನುಜಂ ಹೊಟ್ಟೆ ಹುಣ್ಣಾಗುವಂತೆ ನಕ್ಕು "ತಮ್ಮಾ, ಇದೋ ನಿನ್ನ ಕೋಪಕ್ಕೆ ಕಾರಣ? 'ಮೀನಿನಿಂದ ವೈದ್ಯ ಪ್ರಾರಂಭಿಸು' ಎಂದರೆ ಮೀನು ತಿನ್ನು ಎಂಬರ್ಥದಲ್ಲಿ ಅಲ್ಲ ನಾನು ಹೇಳಿದ್ದು. ಮಾನವರು ಮಾಡಿದ ಯಾವ ಔಷಧಿಯಿಂದಲೂ ನಿನ್ನ ರೋಗ ಗುಣವಾಗುವುದಿಲ್ಲವೆಂದು ಗ್ರಹಿಸಿ, ಇನ್ನು ಮುಂದೆ ದೇವರನ್ನು ಪ್ರಾರ್ಥಿಸುವುದೇ ಯುಕ್ತವಾದ ವೈದ್ಯವೆಂದು ನನಗೆ ತೋರಿತು. ಭಗವಂತನು ಎತ್ತಿದ ಅವತಾರಗಳಲ್ಲಿ ಮೊದಲನೆಯದಾದ ಮತ್ಸ್ಯಾವತಾರದಿಂದ ಪ್ರಾರಂಭಿಸಿ, ಹತ್ತು ಅವತಾರಗಳನ್ನು ಸ್ತೋತ್ರ ಮಾಡುವಂತೆ ಸಲಹೆ ಇತ್ತೆ. ಅಷ್ಟೇ" ಎಂದ.

ನಾರಾಯಣನು ತನ್ನ ಅಜ್ಞಾನಕ್ಕೆ ನಾಚಿ, ಅಂದೇ ರಾಮಾನುಜನ ಸಲಹೆಯ ಮೇರೆಗೆ ದಶಾವತಾರ ಸ್ತೋತ್ರವನ್ನು ಸಂಸ್ಕೃತ ಶ್ಲೋಕ ರೂಪದಲ್ಲಿ ಬರೆಯಲು ಪ್ರಾರಂಭಿಸಿದನು. ಅದೇ ಇಂದು ಮಲೆಯಾಳ ದೇಶದಲ್ಲಿ 'ನಾರಾಯಣೀಯು' ವೆಂದು ಪಠಿಸಲ್ಪಡುವ ಪ್ರಸಿದ್ಧವಾದ ಪುಣ್ಯಪುಸ್ತಕ.

ರಾಮಾನುಜಂ ಮಲೆಯಾಳ ಭಾಷೆಯಲ್ಲಿ ರಚಿಸಿದ ಗ್ರಂಥಗಳೂ ಶಾಶ್ವತವಾಗಿವೆ. ಈಗಲೂ ಆ ದೇಶದಲ್ಲಿ ಬಹುಜನ ಮಕ್ಕಳ ಅಕ್ಷರಾಭ್ಯಾಸದದಿನ ರಾಮಾನುಜಂ ಹುಟ್ಟಿದ ಗ್ರಾಮದಿಂದ ಮರಳು ತಂದು ಅದರ ಮೇಲೆ ಓನಾಮಾಗಳನ್ನು ಬರೆಸುವರಂತೆ.






ಬಹಳ ಕಾಲದ ಹಿಂದೆ ಈಜಿಪ್ಟ್ ದೇಶವನ್ನು ಮೆಹರ್ ಎಂಬ ಸುಲ್ತಾನನು ಆಳುತ್ತಿದ್ದನು. ಇರುವುದರಲ್ಲೇ ತೃಪ್ತಿಪಡದೆ ರಾಜ್ಯವನ್ನು ವಿಸ್ತರಿಸುವ ಆಶೆ ಪ್ರಬಲವಾಯಿತು ಆತನಿಗೆ. ಈ ಆಶೆಯನ್ನು ಈಡೇರಿಸಿಕೊಳ್ಳಲು ಆತನು ಸುತ್ತಮುತ್ತಲಿದ್ದ ದೇಶಗಳನ್ನು ಆಕ್ರಮಿಸಿ ತಾನು ಚಕ್ರವರ್ತಿ ಎಂಬ ಬಿರುದು ಪಡೆಯಬೇಕೆಂದು ನಿರ್ಧರಿಸಿದ. ಕೂಡಲೇ ಖಜಾನೆಯಲ್ಲಿದ್ದ ಹಣವನ್ನೆಲ್ಲಾ ವೆಚ್ಚಮಾಡಿ ಭಾರಿ ಸೈನ್ಯವನ್ನು ಶೇಖರಿಸಿಕೊಂಡು ವಿಜಯಯಾತ್ರೆಯನ್ನು ಸಾಗಿಸಿದ.

ದಂಡೆತ್ತಿ ಬಂದ ಸುಲ್ತಾನನನ್ನು ಪೌರುಷವಂತರಾದ ಕೆಲವು ರಾಜರು ಎದುರಿಸಿದರು. ಆದರೆ ಸಮುದ್ರದ ಪ್ರವಾಹದಂತೆ ಬರುತ್ತಿದ್ದ ಈಜಿಪ್ಟ್ ಸೇನೆಯ ಮುಂದೆ ಅವರ ಪ್ರಯತ್ನ ವಿಫಲವಾಯಿತು. ಆ ಮಹಾ ವೀರರು ಯುದ್ಧದಲ್ಲಿ ಮಡಿದರು. ಎದುರಿಸಿ ಲಾಭವಿಲ್ಲವೆಂದು ಅನೇಕ ರಾಜರು ಸಂಧಿಮಾಡಿಕೊಂಡರು. ಕಪ್ಪ ಕೊಡಲು ಒಪ್ಪಿಕೊಂಡರು.

ರಾಜ್ಯಗಳು ವಶವಾದಂತೆ ಸುಲ್ತಾನನಿಗೆ ರಾಜ್ಯದಾಹವು ಹೆಚ್ಚಾಗುತಿತ್ತು. ಗೆದ್ದ ರಾಜ್ಯಗಳ ಖಜಾನೆಗಳನ್ನು ಕೊಳ್ಳೆಹೊಡೆದು ಹೊಸಹೊಸ ಸೈನ್ಯಗಳ ಜಮಾವಣೆ ಮಾಡಿ, ಹೊಸಹೊಸ ಪ್ರಾಂತಗಳಮೇಲೆ ಮುತ್ತಿಗೆ ಹಾಕುತ್ತಿದ್ದನು. ಈತನ ದೌರ್ಜನ್ಯಕ್ಕೆ ಗುರಿಯಾದ ದೇಶಗಳಲ್ಲಿ 'ಷಿಕಾಂಗೂ' ಒಂದು.

ಷಿಕಾಂಗೂ ಬೆಟ್ಟಗಳಿಂದಲೂ ಅಡವಿಗಳಿಂದಲೂ ತುಂಬಿರುವ ದೇಶ. ಅಹಂಕಾರ ಮದದಿಂದ ಮೆಹರ್ ಆ ದೇಶಕ್ಕೆ ಮುತ್ತಿಗೆ ಹಾಕಿದನೇಹೊರತು, ಅದರ ಗೋಜಿಗೆ ಹೋಗದಿದ್ದರೇನೇ ಚೆನ್ನಾಗಿರುತಿತ್ತು. ಷಿಕಾಂಗೂ ರಾಜನ ಅನುಚರರೆಲ್ಲಾ ನಮ್ಮ ದೇಶದ ಬೇಡರಂತಹ ಜನ. ಅವರು ಮರಗಳ ಮೇಲೆ ಅಥವಾ ಪೊದರಿನ ಹಿಂದೆ ಅವಿತಿಟ್ಟುಕೊಂಡು ವಿಷಪೂರಿತ ಬಾಣಗಳನ್ನು ಪ್ರಯೋಗಿಸಿ ಸುಲ್ತಾನನ ಸೈನ್ಯದಲ್ಲಿ ಬಹಳ ಜನರ ಪ್ರಾಣವನ್ನು ಬಲಿ ತೆಗೆದುಕೊಂಡರು. ಮೈಮರೆತು ರಾತ್ರಿಹೊತ್ತು ನಿದ್ದೆಮಾಡುತ್ತಿರಲು,

ಪಿ. ವಿ. ರಾಮಚಂದ್ರ



ಇರುವೆ ಸಾಲಿನಂತೆ ತಂಡೋಪತಂಡವಾಗಿ ಬೆಟ್ಟದಮೇಲಿಂದ ಇಳಿದು ಬಂದು ಸುಲ್ತಾನನ ಸೈನ್ಯವನ್ನು ತುಂಡರಿಸಿ ಹೋಗುತ್ತಿದ್ದರು.

ಇದೆಲ್ಲವನ್ನೂ ನೋಡಿ ಸೇನಾಧಿಪತಿ ಸುಲ್ತಾನನಿಗೆ "ಪ್ರಭೂ, ನಾವೀ ದಂಡ ಯಾತ್ರೆಯನ್ನು ಇಷ್ಟಕ್ಕೇ ಬಿಟ್ಟುಕೊಡುವುದು ಉತ್ತಮ. ಉಳಿದಿರುವ ನಮ್ಮ ಸೈನಿಕರು ಸ್ವದೇಶಕ್ಕೆ ಹಿಂತಿರುಗಲು ಕಾತುರರಾಗಿದ್ದಾರೆ" ಎಂದು ಹೇಳಿದ. ಆದರೆ ಮೆಹರ್ ಒಪ್ಪಲಿಲ್ಲ. ಆತನಿಗೆ ತನ್ನ ಹಠವೇ ಮುಖ್ಯ.

"ಪ್ರಭೂ, ತಾವು ಚಕ್ರವರ್ತಿ ಎಂಬ ಬಿರುದು ಗಳಿಸಿದಿರಿ. ನೈಲ್‌ನದಿ ಪ್ರಾಂತಕ್ಕೆಲ್ಲಾ ಏಕ ಚಕ್ರಾಧಿಪತ್ಯ ವಹಿಸಿರುವಿರಿ. ಇಷ್ಟಕ್ಕೇ ನಿಲ್ಲಿಸುವುದು ಉಚಿತ. ಜಯಿಸಿದ



ರಾಜ್ಯಗಳನ್ನು ಉಳಿಸಿಕೊಂಡರೆ ಅದೇ ಸಾರ್ಥಕ" ಎಂದ ಸೇನಾನಿ.

'ಈ ಷಿಕಾಂಗ್ ರಾಜ್ಯವನ್ನು ವಶಪಡಿಸಿಕೊಳ್ಳಲೇ ಬೇಕು. ಆಮೇಲೆ ಇಲ್ಲಿಂದ ಕದಲಬೇಕು. ಕೊನೆಗೆ ಈ ಗುಡ್ಡಗಾಡಿನ ರಾಜನಿಗೆ ತಲೆ ಬಾಗಿಸುವುದೆಂದರೇನು?"ಎಂದ ಮೆಹರ್.

ಮೆಹರ್ ಆಜ್ಞೆಗೆ ಎದುರಿಲ್ಲ. ಲೆಕ್ಕವಿಲ್ಲದಷ್ಟು ಹಣ ವೆಚ್ಚಮಾಡಿ ಹೊಸಹೊಸ ಸೈನ್ಯವನ್ನು ತರಿಸಿದ. ಆ ಬೆಟ್ಟ ಗುಡ್ಡಗಳ ಪೊದೆಗಳ ಹೊರತು ಬೇರೇನೂ ಇಲ್ಲದ ಆ ಅಡವಿ ಪ್ರದೇಶವನ್ನು ವಶಪಡಿಸಿಕೊಳುವುದರಿಂದ ತನಗೆ ಬರುವ ಭಾಗ್ಯವೇನೂ ಇಲ್ಲವೆಂಬ ಅಂಶ ಸುಲ್ತಾನನು ಯೋಚಿಸಲೇ ಇಲ್ಲ.

ಛಲವೇ ಪ್ರಧಾನವಾಗಿ, ಷಿಕಾಂಗ್ ರಾಜನಾದ ಬೇಟ್ಸನನ್ನು ಜೀವದಿಂದಲಾದರೂ ಸರಿ, ಕೊಂದಾದರೂ ಸರಿ, ತನಗೆ ತೋರಿಸಿದರೆ ಅವರಿಗೆ ಸಾವಿರ ಮೊಹರುಗಳನ್ನು ಕೊಡುವೆನೆಂದು ಸಾರಿ ಸೈನಿಕರನ್ನು ಹುರಿದುಂಬಿಸಿದ.

ಸುಲ್ತಾನನ ಸೈನಿಕರು ಅದೇ ಕೆಲಸವಾಗಿ ಅಡವಿಯೊಳಕ್ಕೆ ನುಗ್ಗಿ ಕಣ್ಣಿಗೆ ಕಾಣಿಸಿದ ಭಿಲ್ಲರನ್ನು ವಧಿಸಲು ಪ್ರಾರಂಭಿಸಿದರು. ಆದರೆ ಆ ಭಿಲ್ಲರೇನು ಸಾಮಾನ್ಯರೇ? ಸಾಯುವ ಮುನ್ನ ಪ್ರತಿಯೊಬ್ಬನೂ ಸುಲ್ತಾನನ ಹತ್ತು ಜನ ಸೈನಿಕರನ್ನೂ ಕೊಲ್ಲುತ್ತಿದ್ದನು. ಆದರೆ ನೆಲದಿಂದ ಹೊರಹೊಮ್ಮಿದಂತೆ ಬರುತ್ತಿದ್ದ ಈಜಿಪ್ಟ್ ಸೈನ್ಯವನ್ನು ಸೋಲಿಸುವುದು



ಅಸಾಧ್ಯವೆನಿಸಿತು. ಬೆಟ್ಸ್‌ರಾಜನು ಮೊದಲು ಸಂಧಿಮಾಡಿಕೊಳ್ಳಲು ನಿಶ್ಚಯಿಸಿದ. ಆದರೆ ಮೆಹರ್ ಅದಕ್ಕೆ ಒಪ್ಪಲಾರನೆಂದೂ, ಮತ್ತು ಸಂಧಿಗಾಗಿ ಹೋದರೆ ಬಂಧಿಸಿ ಅನೇಕ ಚಿತ್ರವಧೆಗಳಿಗೆ ಗುರಿಮಾಡುವನೆಂದೂ ಗ್ರಹಿಸಿದ.

ಆದುದರಿಂದ ಈ ಪರಿಸ್ಥಿತಿಯಲ್ಲಿ ಯುದ್ಧ ಮಾಡಿ ವೀರಸ್ವರ್ಗ ಪಡೆಯುವದೇ ಉತ್ತಮವೆಂದು ನಿರ್ಧರಿಸಿದ. ತನ್ನ ಅನುಚರರನ್ನು ಸಂಗಡ ಕರೆದುಕೊಂಡು ಈಜಿಪ್ಟ್ ಸೇನೆಯನ್ನು ಎರಡು ಬೆಟ್ಟಗಳ ನಡುವೆ ಸಂಧಿಸಿ ಘೋರಯುದ್ಧ ಮಾಡಿದ. ಆ ಮಹಾಯುದ್ಧದಲ್ಲಿ ಮೆಹರ್‌ಗೆ ವಿಜಯ ಲಭಿಸಿತು. ಭಿಲ್ಲ ವೀರರೆಲ್ಲಾ ಮಡಿದರು. ಮೆಹರ್ ಸೈನ್ಯದಲ್ಲಿ ಸಾವಿರಾರು ಜನ ಹತರಾದರು.

"ಬೆಟ್ಸ್ ಎಲ್ಲಿ?" ಎಂದ ಮೆಹರ್ ಆತುರದಿಂದ. "ಗಾಯಗಳಿಂದ ತುಂಬಿರುವ ಆತನ ಕಳೇಬರ ನಮ್ಮ ಸೈನಿಕರ ಶವಗಳ ಮಧ್ಯೆ ಎಲ್ಲೋ ಬಿದ್ದಿರಬಹುದು ಪ್ರಭೂ" ಎಂದ ಸೇನಾಧಿಪತಿ. ಸುಲ್ತಾನನಿಗೆ ಅದನ್ನು ನೋಡಬೇಕೆಂಬ ವಿಚಿತ್ರ ಆಶೆಯುಂಟಾಯಿತು. ಆ ಶವವನ್ನು ರಣರಂಗದಲ್ಲಿ ಹುಡುಕಿಕೊಂಡು ಹೊರಟ. ಆತನು ಆ ಸ್ಥಳವನ್ನು ಸೇರುವ ವೇಳೆಗೆ ಸರಿಯಾಗಿ ಅಲ್ಲಿ ಕಾರ್ಗತ್ತಲೆಯ ಶರೀರ ಛಾಯೆಯುಳ್ಳ, ಭಯಂಕರಾಕಾರದ ಎತ್ತರವಾದ ಮನುಷ್ಯನೊಬ್ಬನು ಹೆಣಗಳ ನಡುವೆ ನಾಲ್ಕು ಕಡೆಯೂ ನೋಡುತ್ತಾ ನಿಂತಿರುವುದು ಕಾಣಿಸಿತು. ಅವನನ್ನು ಕುರಿತು



ಮೆಹರು "ಯಾರು ನೀನು?" ಎಂದು ಕೇಳಿದ. "ಇವನು ಯಾರೋ ನರಮಾಂಸ ಭಕ್ಷಕ. ಶವಗಳನ್ನು ಕಿತ್ತು ತಿನ್ನಲು ಬಂದಿದ್ದಾನೆ" ಎಂದ ಸೇನಾಧಿಪತಿ. ಸೇನಾಧಿಪತಿ ಹೇಳಿದ ಮಾತು ನಿಜ. ಆಫ್ರಿಕಾ ದೇಶದ ಅಡವಿಗಲ್ಲಿ ನರಮಾಂಸ ತಿನ್ನುವವರೆಷ್ಟೋ ಜನರಿದ್ದಾರೆ.

ಮೆಹರ್ ಆ ನರಮಾಂಸ ಭಕ್ಷಕನೊಂದಿಗೆ "ಇಷ್ಟು ಮಾಂಸ ಲಭಿಸಿರುವಾಗ ಯಾವುದೋ ಒಂದು ಶವವನ್ನು ತೆಗೆದುಕೊಂಡು ಹೋಗದೆ ಅದೇಕೆ ಹಾಗೆ ದಿಕ್ಕುಗಳನ್ನು ನೋಡುತ್ತಿರುವೆ?" ಎಂದು ಕೇಳಿದ.

"ಇವರೆಲ್ಲರನ್ನೂ ತಿನ್ನಲು ಯಾರೋ ಕೊಂದು ಹಾಕಿರುವಂತಿದೆ. ನನಗೆ ಬೇಕಾಗಿರುವುದು ಒಂದೇ ಒಂದು ಹೆಣ. ಆದರೂ





ಅವರ ಅನುಮತಿ ಪಡೆದ ತರುವಾಯ ತಿನ್ನುವುದು ಧರ್ಮವಷ್ಟೇ? ಆದುದರಿಂದ ಇವರೆಲ್ಲರನ್ನೂ ಕೊಂದು ಹಾಕಿದಾತನಿಗಾಗಿ ಹುಡುಕುತ್ತಿರುವೆನು" ಎಂದನಾ ಭೀಕರಾಕೃತಿಯವ.

ಮೆಹರ್ ಗಹಗಹಿಸಿ ನಗುತ್ತಾ "ಇವರೆಲ್ಲರನ್ನೂ ಕೊಲ್ಲಿಸಿದ್ದು ನಾನೇ! ಆದರೆ ತಿನ್ನಲು ಮಾತ್ರವಲ್ಲ" ಎಂದ.

ಆಗ ಆ ನರಮಾಂಸ ಭಕ್ಷಕನು ಆಶ್ಚರ್ಯ ಚಕಿತನಾಗಿ "ತಿನ್ನಲು ಅಲ್ಲದಿದ್ದರೆ ವೃಥಾ ಏಕೆ ಇಷ್ಟು ಜನರನ್ನು ಕೊಲ್ಲಬೇಕಿತ್ತು?" ಎಂದು ಕೇಳಿದ.

ಮೆಹರ್ ಚಕ್ರವರ್ತಿ ತನ್ನ ಸೇನಾಧಿಪತಿಯೊಂದಿಗೆ "ಇವನು ಕೇವಲ ಅನಾಗರೀಕ. ಇವನಿಗೆ ತಿಳಿಯುವಂತೆ ಹೇಳುವುದು ಅಸಾಧ್ಯ" ಎಂದ.

ಅಷ್ಟರಲ್ಲಿ ಚಕ್ರವರ್ತಿಯ ಹಿಂದೆ ಯಾರೋ ನಗುತ್ತಿರುವಂತೆ ಕೇಳಿಸಿತು. ಮೆಹರ್ ಗಬಕ್ಕನೆ ಹಿಂತಿರುಗಿ ನೋಡಲು ಅಡವಿಯಲ್ಲಿ ತಪಸ್ಸುಮಾಡಿಕೊಳ್ಳುವ ಫಕೀರನೊಬ್ಬನು ಕಾಣಿಸಿದ. "ಮಹಾತ್ಮನೇ ನೀನು ಯಾರು?" ಎಂದು ವಿನಯದಿಂದ ಕೇಳಿದ ಮೆಹರ್.

"ಸುಲ್ತಾನ್, ನೀನು ಅನಾಗರೀಕನೆಂದು ಭಾವಿಸಿರುವ ಈ ನರಮಾಂಸ ಭಕ್ಷಕನು ಹಸಿವು ತೀರಿಸಿಕೊಳ್ಳುವ ಸಲುವಾಗಿ ಹೊರತು ಅನ್ಯಥಾ ಜೊತೆ ಮಾನವರನ್ನು ಕೊಲ್ಲುವುದಿಲ್ಲ. ಆದರೆ ನೀನೋ? ಸಾಮ್ರಾಜ್ಯವನ್ನು ವಿಸ್ತರಿಸುವ ಆಕಾಂಕ್ಷೆಯಿಂದ ಯುದ್ಧಕ್ಕೆ ತಲೆಹಾಕಿ ಲಕ್ಷಾಂತರ ಮಾನವರ ಪ್ರಾಣಗಳನ್ನು ನಿಷ್ಕಾರಣವಾಗಿ ಬಲಿ ತೆಗೆದುಕೊಂಡೆ. ಹೌದೇ? ಒಂದು ಕ್ಷಣ ಆಲೋಚಿಸು. ಈಗ ನಿಮ್ಮಿಬ್ಬರಲ್ಲಿ ಯಾರು ಅನಾಗರೀಕರೋ ನಿನಗೇ ತಿಳಿಯುತ್ತದೆ" ಎಂದು ಆ ಫಕೀರನು ಸಿಡಿಲೆರಗಿದಂತೆ ನುಡಿದ.

ಫಕೀರನ ಮಾತಿನ ಸತ್ಯಾಂಶವನ್ನು ಗ್ರಹಿಸಿ ಮೆಹರ್ ನಾಚಿಕೆಯಿಂದ ತಲೆ ಬಾಗಿಸಿದ. ಅಷ್ಟೇ ಅಲ್ಲ, ಆ ಕ್ಷಣವೇ ಆತನ ಮನಸ್ಸು ಸಂಪೂರ್ಣವಾಗಿ ಬದಲಾವಣೆ ಹೊಂದಿತು. "ಇಂದಿನಿಂದ ಸಂಗ್ರಾಮದ ಸಂಗತಿಯನ್ನು ತಲೆಗೆ ಹಾಕಿಕೊಳ್ಳುವುದಿಲ್ಲ" ಎಂದು ಆತನು ದೃಢನಿಶ್ಚಯ ಮಾಡಿಕೊಂಡ.






ಪುಟ್ಟಪ್ಪ ಮತ್ತು ಸೋಮಪ್ಪ ಅಣ್ಣ ತಮ್ಮಂದಿರು. ಬೇಸಾಯ ಅವರ ಕಸಬು. ಇಬ್ಬರೂ ಸುಖವಾಗಿ ಜೀವನ ಸಾಗಿಸಿ ಕೊಂಡಿದ್ದರು. ಆದರೆ ಒಂದು ವರ್ಷ ಎಲ್ಲೂ ಪಸಲು ಆಗಲಿಲ್ಲ. ಅದರ ಪರಿಣಾಮವಾಗಿ ದೇಶದಲ್ಲೆಲ್ಲಾ ಬರ ಬಂತು. ಪ್ರಜೆಗಳು ಕೂಲಿ ಗಾಗಿ ತುಂಬಾ ಪರಿದಾಡಿದರು.

ಭಾರಿ ಭಾರಿ ಸಾಹುಕಾರರೇ ತಾಪತ್ರಯ ಪಡುತ್ತಿರಲು, ಪುಟ್ಟಪ್ಪ ಸಹೋದರರಂತಹ ಸಣ್ಣಪುಟ್ಟ ಬೇಸಾಯಗಾರರ ಪರಿಸ್ಥಿತಿ ನೀವೇ ಯೋಚಿಸಿ. ಅವರು ಅವಲಕ್ಕಿ ತಿಂದು ಕಾಲ ಹರಣ ಮಾಡಬೇಕಾದ ಅವಸ್ಥೆಗೆ ಇಳಿದರು.

ಹೀಗಿರಲು ಒಂದು ದಿನ ಭಾರಿ ಮಳೆ ಹಿಡಿಯಿತು. ಅವರು ಅವಲಕ್ಕಿ ತಂದು ತಿನ್ನುತ್ತಿರಲು ಎದುರು ಮನೆ ಜಗಲಿಯಮೇಲೊಂದು ಗಿಳಿ ಕಾಣಿಸಿತು. ಅದು ಮಳೆಯಿಂದ ತೊಯ್ದು, ಚಳಿಯಿಂದ ನಡುಗುತಿತ್ತು.

ಕಿರಿಯವನಾದ ಸೋಮಪ್ಪ ಇದನ್ನು ಗಮನಿಸಿದ. ಹಾರಲಾರದ ಅದರ ಸ್ಥಿತಿಯನ್ನು ನೋಡಿ ಆತನಲ್ಲಿ ಮರುಕ ವುಂಟಾಯಿತು. ಅಣ್ಣನ ಅಪ್ಪಣೆ ಪಡೆದು ಅದನ್ನು ಕೈಯಲ್ಲಿ ಹಿಡಿದುಕೊಂಡು ಬಂದ. ತರಗೆಲೆಗಳನ್ನು ತಂದು ಬೆಂಕಿಮಾಡಿದ. ಅದರ ಶರೀರವನ್ನೆಲ್ಲಾ ಕಾಯಿಸಿ ಬೆಚ್ಚಗೆ ಮಾಡಿಸಿದ. ಗಿಳಿಗೆ ಚಳಿಯ ಬಾಧೆ ತುಸ ಕಡಿಮೆಯಾದುದನ್ನು ಕಂಡು, ತನ್ನ ಪಾಲಿನ ಅವಲಕ್ಕಿಯಲ್ಲಿ ಕೊಂಚ ತೆಗೆದು ಅದರ ಮುಂದೆ ಇಟ್ಟ. ಸೋಮಪ್ಪ ಮಾಡಿದ ಸೇವೆಯಿಂದ ಗಿಳಿಗೆ ಚಳಿಹೋದುದು ಮಾತ್ರವೇ ಅಲ್ಲ, ಹಸಿವೂ ತೀರಿತು. ಮೈಯಲ್ಲಿ ಹುಷಾರುಂಟಾಯಿತು.

ಚೇತರಿಸಿಕೊಂಡು ಸ್ತಿಮಿತ ಹೊಂದಿದ ನಂತರ, ಆ ಗಿಳಿ "ಸೋಮಪ್ಪಾ, ನಿನಗೇನು ಬೇಕು?" ಎಂದು ಮಾನವ ಭಾಷೆಯಲ್ಲಿ ಕೇಳಿತು. ಈ ವಿಸ್ಮಯವನ್ನು ಕೇಳಿ ಹೊರಗೆ ಕುಳಿತಿದ್ದ ಪುಟ್ಟಪ್ಪ ಒಳಗೆ ಬಂದ. ಕೂಡಲೇ ಗಿಳಿ "ಪುಟ್ಟಪ್ಪಾ, ನಿನಗೇನು ಬೇಕು?" ಎಂದು ಕೇಳಿತು. ಅದಕ್ಕೆ ಆತನು "ಗಿಳಿಯೇ, ನಿನ್ನದು ಯಾವ ಊರು? ನಿನಗೆ ಯಾರು

ವೇದಾವತಿ, ಕಡೂರು




ಮಾನವಭಾಷೆ ಕಲಿಸಿದರು?" ಎಂದು ಕೇಳಿದ. ಅದಕ್ಕೆ ಉತ್ತರವಾಗಿ ಆ ಗಿಳಿ ಎಂದಿತು: "ನಾನೊಂದು ದೊಡ್ಡ ಗಿಳಿಗಳ ಗುಂಪಿನೊಂದಿಗೆ ದ್ವೀಪಾಂತರಕ್ಕೆಹೋಗುತ್ತಿರುವೆನು. ಆದರೆ ಮಳೆಯ ದೆಶೆಯಿಂದ ರೆಕ್ಕೆಗಳು ನೆನೆದು ಹಾರಲಾರದೆ ಈ ಮನೆ ಸೇರಿದೆ. ನಾನು ಈಗಲೇ ನನ್ನ ಗುಂಪನ್ನು ಸೇರಬೇಕು. ನಿಮಗೇನು ಬೇಕೋ ಕೇಳಿಕೊಳ್ಳಿ."

ಆಗ ಪುಟ್ಟಪ್ಪ "ಎಲೈ ಗಿಳಿಯೇ ನಾವು ಬಡವರಾಗಿದ್ದೇವೆ. ನಮ್ಮ ಬಡತನ ಹೋಗಲಾಡಿಸುವೆಯಾ?" ಎಂದು ಕೇಳಿದ.

ಅದಕ್ಕೆ ಆ ಗಿಳಿ ಎಂದಿತು: "ಅದೆಷ್ಟರ ಕೆಲಸ. ನಾನು ದ್ವೀಪಾಂತರ ಪ್ರವಾಸಮಾಡಿಕೊಂಡು ಆರು ತಿಂಗಳ ನಂತರ ಬರುವೆನು. ಆಗ ನಿನಗೊಂದು ಬೆಳ್ಳಿ ಎಲೆ ತಂದುಕೊಡುವೆನು. ಅದನ್ನು ಭದ್ರವಾಗಿಟ್ಟುಕೊಂಡೆ ಎಂದರೆ ನಿನ್ನ ಮನೆಯಲ್ಲಿ ಸರ್ವದಾ ಧನ ಓಡಾಡುತ್ತಿರುತ್ತದೆ."

ಆ ತರುವಾಯ ಗಿಳಿ "ಸೋಮಪ್ಪಾ, ನಿನಗೇನು ಬೇಕು?" ಎಂದು ಕಿರಿಯುವನನ್ನು ಕೇಳಿತು. ಅದಕ್ಕೆ ಕಿರಿಯುವನು "ಎಲೈ ಗಿಳಿಯೇ, ನನ್ನನ್ನು ಸರ್ವದಾ ಸಂತೋಷವಾಗಿರುವಂತೆ ಮಾಡಬಲ್ಲೆಯಾ?" ಎಂದ.

ಅದಕ್ಕೆ ಗಿಣಿ "ಓ ಅದೇನುಮಹಾ, ನಾನು ದ್ವೀಪಾಂತರ ಪ್ರವಾಸದಿಂದ ಹಿಂತಿರುಗುವಾಗ ಒಂದು ಬಣ್ಣದ ಎಲೆ ತಂದು ಕೊಡುವೆನು. ಅದರ ರಸವನ್ನು ನಿನ್ನ ರುಮಾಲು ಮೇಲೆ ಸಿಂಪಡಿಸಿ ತಲೆಗೆ ಕಟ್ಟಿಕೊಂಡಿರುವಷ್ಟುಕಾಲ ನಿನ್ನ ಮುಖ ನಸುನಗೆಯಿಂದ ತುಂಬಿ ತುಳುಕಾಡುತ್ತಿರುತ್ತದೆ" ಎಂದಿತು.

ಗಿಳಿ ದ್ವೀಪಾಂತರ ಹೊರಟಿತು. ಆರು ತಿಂಗಳಾಯಿತು. ಮತ್ತೆ ಹಿಂತಿರುಗಿ ಬಂತು ಗಿಳಿ. ಎರಡು ಎಲೆಗಳನ್ನು ತನ್ನ ಕೊಕ್ಕಿನಿಂದ ಕಚ್ಚಿಕೊಂಡು ಬಂತು. ಅವುಗಳಲ್ಲಿ ಒಂದು ಬೆಳ್ಳಿಯ ಎಲೆ, ಇನ್ನೊಂದು ಬಣ್ಣದ ಎಲೆ.

ಬೆಳ್ಳಿಯ ಎಲೆಯನ್ನು ಪುಟ್ಟಪ್ಪನಿಗೂ, ಬಣ್ಣದ ಎಲೆಯನ್ನು ಸೋಮಪ್ಪನಿಗೂ ಕೊಟ್ಟು "ಇನ್ನುಹೊರಡುತ್ತೇನೆ" ಎಂದಿತು. "ಇರು, ಇರು ಗಿಳಿ ನಮ್ಮ ಮನೆಯಲ್ಲಿ ಊಟ ಮಾಡಿಕೊಂಡು ಹೋಗುವೆಯಂತೆ" ಎಂದರು ಆ ಸಹೋದರರು. ಆದರೆ ಗಿಳಿ "ಈಗಲ್ಲ,

ಮತ್ತೊಂದುಸಾರಿ ಬರುವೆನು. ನಮ್ಮ ಹಿಂಡು ಮುಂದೆ ಹಾರಿ ಹೋಗುತ್ತಿದೆ. ನಾನು ಹೋಗ ಬೇಕು" ಎಂದು ಚಡಪಡಿಸಿತು. ಆಗ ಸೋಮಪ್ಪ "ಹೋಗಲಿ, ಇದನ್ನಾದರೂ ಕೊಂಚ ತಿನ್ನು" ಎಂದು ಗಿಳಿಗೆ ಅವಲಕ್ಕಿ ಸ್ವಲ್ಪ ಕೊಟ್ಟ. ಗಿಳಿ ಹಾರಿಹೋಯಿತು.

ಪುಟ್ಟಪ್ಪ ತನಗೆ ಗಿಳಿ ಕೊಟ್ಟಿದ್ದ ಎಲೆ ತೆಗೆದುಕೊಂಡು ಹೋಗಿ ಅಕ್ಕಸಾಲಿಗನಿಗೆ ತೋರಿಸಿದ. ಆತನು ಅದನ್ನು ಪರೀಕ್ಷೆಮಾಡಿ "ಇದು ಬೆಳ್ಳಿಯ ಎಲೆ. ನಿನಗೆಲ್ಲಿ ಸಿಕ್ಕಿತು?" ಎಂದು ಕೇಳಿದ. ಆಗ ಪುಟ್ಟಪ್ಪ ಗಿಳಿ ತನಗೆ ದ್ವೀಪಾಂತರದಿಂದ ತಂದುಕೊಟ್ಟ ವಿಷಯ ವನ್ನೆಲ್ಲಾ ಆತನಿಗೆ ಹೇಳಿದ. ಈ ಸುದ್ದಿ ಒಬ್ಬ ರಿಂದ ಒಬ್ಬರ ಕಿವಿಗೆಬಿದ್ದು ಗ್ರಾಮಾಧಿಕಾರಿ ಯಾದ ಮುದ್ದಪ್ಪನಿಗೂ ತಿಳಿಯಿತು. ಆತನು ಪುಟ್ಟಪ್ಪನನ್ನು ಕರೆಯಿಸಿ, ವಿಷಯವನ್ನೆಲ್ಲಾ ತಿಳಿಸುವಂತೆ ಆಜ್ಞಾಪಿಸಿದ. ಪುಟ್ಟಪ್ಪ ನಡೆದ ಸಂಗತಿಯನ್ನೆಲ್ಲಾ ಹೇಳಿದ. ಅಷ್ಟಕ್ಕೆ ಸುಮ್ಮ ನಾಗದೆ "ನನ್ನ ತಮ್ಮ ಸೋಮಪ್ಪ ಕಡು ಮೂರ್ಖ. ಗಿಳಿ ಕೋರಿಕೊಳ್ಳುವಂತೆ ಹೇಳಿ ದಾಗ ಬರೀ ಬಣ್ಣದ ಎಲೆ ಬೇಡಿಕೊಂಡ" ಎಂದು ಬೇರೆ ಹೇಳಿದ. ಗ್ರಾಮಾಧಿಕಾರಿ ಸೋಮಪ್ಪನನ್ನೂ ಕರೆಯಿಸಿ, ಅವನ ಹತ್ತಿರವಿದ್ದ ಬಣ್ಣದ ಎಲೆಯನ್ನು ನೋಡಿದ. ಸೋಮಪ್ಪನ ಮುಖದ ಮೇಲೆ ಗೆಲುವು ಕಾಣಿಸುತಿತ್ತು. ಅಣ್ಣತಮ್ಮಂದಿರು ಹೇಳಿದುದೆಲ್ಲಾ ನಿಜವೆಂದು ಗ್ರಹಿಸಿದ ಗ್ರಾಮಾಧಿಕಾರಿ.




ಬಳಿಕ ಪುಟ್ಟಪ್ಪನನ್ನು ಹತ್ತಿರಕ್ಕೆ ಕರೆದು, "ನನ್ನ ಒಬ್ಬಳೇ ಮಗಳನ್ನು ನಿನಗೆ ಕೊಟ್ಟು ವೈಭವದಿಂದ ವಿವಾಹ ಮಾಡುತ್ತೇನೆ. ನನ್ನ ಅನಂತರ ನನ್ನ ಆಸ್ತಿ ಎಲ್ಲಾ ನಿನಗೆ ಲಭಿಸು ವುದು. ತಿಳಿಗೇಡಿಯಾದ ನಿನ್ನ ತಮ್ಮನೊಂದಿಗೆ ಮಾತ್ರ ಸೇರಬೇಡ" ಎಂದು ಬೋಧಿಸುತ್ತಾ ಹಿತೋಪದೇಶ ಮಾಡಿದ.

ಪುಟ್ಟಪ್ಪನಿಗೆ ಬಹಳ ಸಂತೋಷವಾಯ್ತು. ಗ್ರಾಮಾಧಿಕಾರಿಯ ಅಳಿಯನಾದ. ತಮ್ಮ ತಾತಂದಿರ ಕಾಲದ ಜೋಪಡಿಯನ್ನು ತಮ್ಮ ನಿಗೆ ಬಿಟ್ಟುಕೊಟ್ಟು ತಾನು ಮಾವನ ಮನೆ ಯಲ್ಲೇ ಇದ್ದುಬಿಟ್ಟ. ಮಾವನಿಗೆ ವಯಸ್ಸಾ ದಂತೆ ಹೊಲಗದ್ದೆಗಳ ಮೇಲ್ವಿಚಾರಣೆ ಆತನ ಪಾಲಿಗೆ ಬಂತು. ಪುಟ್ಟಪ್ಪ ಅರಿತು ನುರಿತ



ಸದಾ ಸೋಮಪ್ಪನ ಮುಖದಲ್ಲಿ ಕಿರುನಗೆ ತಾಂಡವವಾಡುತಿತ್ತು. ಆತನ ಕಿರುನಗೆಗೆ ಒಂದು ಮಹಿಮೆಯಿದೆ. ಸೋಮಪ್ಪನಿದ್ದ ಜಾಗದಲ್ಲಿ ಆತನ ಬಾಯಿಂದ ಮಾತು ಬಂದರೆ ಸಾಕು, ಎಲ್ಲರ ಮನಸ್ಸಿಗೂ ಅದೊಂದು ತರಹ ಹಾಯೆನಿಸುವುದು. ಆತನಿದ್ದ ಸ್ಥಳದಲ್ಲಿ ರೋಗಿಗಳ ವ್ಯಾಧಿಗಳು ಗುಣವಾಗುವುವು. ಪ್ರಜೆಗಳು ತಮ್ಮ ಕಷ್ಟಗಳನ್ನು ಮರೆಯುವರು. ಈ ರಹಸ್ಯ ಕಂಡುಹಿಡಿದ ಜನ ಸೋಮಪ್ಪನನ್ನು ತಮ್ಮ ಮನೆಗೆ ಕರೆದುಕೊಂಡು ಹೋಗಿ "ಮಾತಾಡು ಸೋಮಪ್ಪಾ" ಎಂದು ಬಲವಂತಮಾಡಿ ಮಾತನಾಡಿಸಿ, ತಮ್ಮ ರೋಗಗಳಿಂದ ಮುಕ್ತರಾಗುವರು.

ಬೇಸಾಯಗಾರನಾದುದರಿಂದ ಅವುಗಳನ್ನೆಲ್ಲಾ ವೃದ್ಧಿಮಾಡಿದ. ಧನ ಮತ್ತು ಧಾನ್ಯಲಕ್ಷ್ಮಿಯೊಂದಿಗೆ ಮನೆ ಶೋಭಾಯಮಾನವಾಗಿ ಕಂಗೊಳಿಸುತ್ತಿತ್ತು. ಪುಟ್ಟಪ್ಪನಿಗೆ ಗ್ರಾಮದಲ್ಲಿ ಗೌರವವೂ ಹೆಚ್ಚಾಯಿತು.

ಇನ್ನು ಸೋಮಪ್ಪನಿಗೆ ಪೂರ್ವೀಕರ ಜೋಪಡಿಯಲ್ಲೇ ನಿವಾಸ. ಕೈಯಲ್ಲಿ ಕಿಲುಬು ಕಾಸಾದರೂ ಇಲ್ಲ. ಬೇಸಾಯ ಮಾಡುವುದಾದರೂ ಹೇಗೆ? ದಿನವೆಲ್ಲಾ ದೇಹದಂಡಿಸಿ ಕಾಳು ಸಂಪಾದಿಸಿಕೊಳ್ಳುವನು. ಸಮಯ ಸಿಕ್ಕಿದರೆ ಹುಲ್ಲು ಕೊಯಿದು ಕಾಡಿನಿಂದ ಸೌದೆ ತಂದು ಅದನ್ನುಮಾರಿ ಹೇಗೊ ಒಂದು ರೀತಿ ಜೀವನ ನಡೆಸುತ್ತಿದ್ದ. ಆತನಿಗೆ ಯಾವ ಚಿಂತೆಯೂ ಇರಲಿಲ್ಲ.

ಹೀಗಿರಲು ಆ ದೇಶದ ಅರಸನ ಹುಟ್ಟಿದ ಹಬ್ಬ ಬಂತು. ಅಂದು ತಮ್ಮ ಕೈಕೆಳಗಿನ ಗ್ರಾಮಾಧಿಕಾರಿಗಳೆಲ್ಲಾ ಜರೂರು ಬರಬೇಕೆಂದು ರಾಜರ ಆಜ್ಞೆ ಆಯಿತು. ಈಗ ಪುಟ್ಟಪ್ಪ ಗ್ರಾಮಾಧಿಕಾರಿಯಾಗಿದ್ದ. ಪುಟ್ಟಪ್ಪ ಷೋಕಾಗಿ ಬಟ್ಟೆ ಹಾಕಿಕೊಂಡು ಸಿದ್ಧನಾದ. ಆತನ ಮಡದಿಯೂ ಸಹ ತನ್ನ ಒಡವೆಗಳನ್ನೆಲ್ಲಾ ಧರಿಸಿಕೊಂಡಳು. ಇಬ್ಬರೂ ಗಾಡಿಯಲ್ಲಿ ಕುಳಿತುಕೊಂಡರು. ಅವರ ಗಾಡಿ ಒಂದು ಅಡವಿಯಲ್ಲಿ ಹೋಗುತ್ತಿದೆ. ದಾರಿಯಲ್ಲಿ ಕಳ್ಳರ ನಾಯಕನು ಮುದುಕನೊಬ್ಬನ ವೇಷ ಧರಿಸಿಕೊಂಡು ಅಲ್ಲಿಗೆ ಬಂದು ಜೋತಿಷ್ಕನಂತೆ ನಟಿಸಿದ. ಅವನು ಕೇಳುವ ಪ್ರಶ್ನೆ, ಹೇಳುವ ಉತ್ತರ ಪುಟ್ಟಪ್ಪನನ್ನು ಆಶ್ಚರ್ಯ

ಚಕಿತನನ್ನಾಗಿ ಮಾಡಿತು. ಮಾತಿನ ಮಧ್ಯ ದಲ್ಲಿ "ಸ್ವಾಮಿ, ನಿಮ್ಮ ಹತ್ತಿರ ನಶ್ಯವಿದ್ದರೆ ಕೊಡಿ ಸ್ವಲ್ಪ" ಎಂದು ಕೈ ಚಾಚಿದ ಆ ಮುದುಕ. ತನ್ನ ದೊಡ್ಡಸ್ತಿಕೆ ತೋರಿಸಿ ಕೊಳ್ಳಲು ಪುಟ್ಟಪ್ಪ ಠೀವಿಯಿಂದ ಬೆಳ್ಳಿಕಟ್ಟು ಹಾಕಿದ ನಶ್ಯದ ಡಬ್ಬಿ ತೆಗೆದು ವೃದ್ಧನಿಗೆ ನಶ್ಯ ಕೊಟ್ಟ. ಆ ಮುದುಕ ಪುಟ್ಟಪ್ಪನನ್ನು ಹರಸುತ್ತ, ಒಂದು ಚಿಟಿಕೆ ನಶ್ಯ ಮೂಗಿ ಗೇರಿಸಿ, ಎರಡುಸಾರಿ ಸೀನಿದ. ಆಗ ಮರ ಗಳ ಹಿಂದೆ ಅವಿತಿಟ್ಟುಕೊಂಡಿದ್ದ ನಾಲ್ವರು ಕಳ್ಳರು ಹೊರಕ್ಕೆ ಬಂದರು. ಪುಟ್ಟಪ್ಪ ಮತ್ತು ಆತನ ಹೆಂಡತಿ ಭೀತಿಗೊಂಡರು. ಮುದುಕ ಏನೂ ತಿಳಿಯದವನಂತೆ ನಟಿಸಿದ.




ನಾಲ್ಕು ಕಡೆಯಿಂದಲೂ ಕಳ್ಳರು ಬಂದು ಆ ಗಾಡಿಯನ್ನು ಸುತ್ತುಗಟ್ಟಿದರು. "ನಗ ನಾಣ್ಯಗಳನ್ನೆಲ್ಲಾ ಒಪ್ಪಿಸುವಿರಾ, ಇಲ್ಲ..." ಎಂದು ಥಳಥಳನೆಂದು ಹೊಳೆಯುತ್ತಿದ್ದ ಕತ್ತಿ ಗಳನ್ನು ಝಳಪಿಸಿದರು. ಬೇರೇನೂ ಮಾಡ ಲಾರದೆ ತಮ್ಮ ಹತ್ತಿರವಿದ್ದುದನ್ನೆಲ್ಲಾ ಕಳ್ಳರ ಕೈಗೆ ಕೊಟ್ಟು, ಉಟ್ಟಬಟ್ಟೆಯೊಂದಿಗೆ ಒಂದು ಹಳ್ಳಿ ಸೇರಿ, ಅಡುಗೂಲಜ್ಜಿಯ ಮನೆಯಲ್ಲಿ ಇಳಿದುಕೊಂಡರು.

ಹೀಗಿರಲು ಆ ದೇಶದ ರಾಜನಿಗೆ ಒಬ್ಬ ಮಗಳಿದ್ದಳು. ಆತನು ತನ್ನ ಮಗಳಿಗೆ ಅನು ರೂಪನಾದ ರಾಜಕುಮಾರನನ್ನು ಹುಡುಕಿ ಕೊಂಡು ಬರುವಂತೆ ಚಾರರನ್ನು ಎಲ್ಲ ದೇಶ ಗಳಿಗೂ ಕಳುಹಿಸಿದ. ಆದರೆ ಲಾಭವಿಲ್ಲ ದಾಯಿತು. ಆದುದರಿಂದ ರಾಜ ಮತ್ತು ರಾಣಿ ಚಿಂತೆಯಪಾಲಾಗಿದ್ದರು.

ಆಗ ಯಾರೋ ಬಂದು ಸೋಮಪ್ಪನು ಯಾರಿಗೆ ಯಾವುದೇವಿಧವಾದ ಚಿಂತೆಯಿದ್ದರೂ ಹೋಗಲಾಡಿಸುವನೆಂದು ಹೇಳಿದರು. ಹಾಗಾ ದರೆ ಆತನನ್ನು ಕರೆದುತರುವಂತೆ ರಾಜರ ಆಜ್ಞೆಯಾಯಿತು.

ರಾಜಾಜ್ಞೆ ಮೀರಲಾರದೆ ಸೋಮಪ್ಪ ನಡುವಿಗೆ ಒಂದು ಬಿಳಿವಸ್ತ್ರವನ್ನು ಕಟ್ಟಿ ಕೊಂಡು, ತಲೆಗೆ ಬಣ್ಣದೆಲೆಯ ರುಮಾಲು ಧರಿಸಿ, ಒಂದು ಕೋಲು ಹಿಡಿದುಕೊಂಡು ರಾಜಭವನಕ್ಕೆ ಬಂದ.

ಸೋಮಪ್ಪನ ನಗುಮುಖ ಕಂಡು ರಾಜ ನಿಗೆ ಸಂತೋಷವುಂಟಾಯಿತು. "ಸಾವಕಾಶ




ವಾಗಿ ನಾಳೆ ಮಾತನಾಡುವ" ಎಂದ ರಾಜ. ಸೋಮಪ್ಪನಿಗೆ ಪ್ರತ್ಯೇಕವಾಗಿ ಅರಮನೆಯಲ್ಲಿ ಒಂದು ಕೋಣೆ ಕೊಟ್ಟರು. ಮಾರ್ಗಾಯಾಸದಿಂದ ಸೋಮಪ್ಪನಿಗೆ ನಿದ್ದೆಬಂತು. ರಾಜನ ಕೋರಿಕೆಯಂತೆ ಒಂದುವಾರ ಅಲ್ಲೇ ಇದ್ದ.

ಅಷ್ಟರಲ್ಲಿ ರಾಜಕುಮಾರಿಗೆ ತಕ್ಕ ವರನು ಸಿಕ್ಕಿದ ನೆಂಬ ಸುದ್ದಿ ಬಂತು. ಆಗ ರಾಜನು "ಸೋಮಪ್ಪ, ಕುಮಾರಿಯ ವಿವಾಹ ನೋಡಿಕೊಂಡು ಹೋಗುವೆಯಂತೆ. ಇರು" ಎಂದ. "ಸರಿ ಮಹಾಪ್ರಭೂ" ಎಂದು ಒಪ್ಪಿಕೊಂಡ ಸೋಮಪ್ಪ.

ಸೋಮಪ್ಪ ಒಂದು ದಿನ ಹೊಳೆಯಲ್ಲಿ ಸ್ನಾನಮಾಡುತ್ತಿರುವಾಗ ಒಬ್ಬ ಸೇವಕನು 'ಈ ಹಾಳು ರುಮಾಲು ಕಟ್ಟಿಕೊಂಡು ಹೋದರೆ ಅರಮನೆಯಲ್ಲಿ ಎಲ್ಲರಿಗೂ ಅವಮಾನವಾಗುತ್ತೆ' ಎಂದುಕೊಂಡು ಸೋಮಪ್ಪನಿಗೆ ತಿಳಿಯದಂತೆ ಕಟ್ಟೆಯಮೇಲಿಟ್ಟಿದ್ದ ಆತನ ಮಹಿಮೆಯ ಬಣ್ಣದ ರುಮಾಲನ್ನು ತೆಗೆದು ಒಂದೆಡೆ ಹಾಕಿದ.

ಸ್ನಾನಮಾಡಿಕೊಂಡು ಬಂದು ಸೋಮಪ್ಪ "ನನ್ನ ರುಮಾಲು ಎಲ್ಲಿ" ಎಂದು ಅವನನ್ನು ಕೇಳಿದ. ಅದಕ್ಕೆ ನೌಕರನು "ಮಹಾರಾಜರ ದಯೆ ನಿಮ್ಮ ಮೇಲಿರುವಾಗ ಆ ಹಾಳು ರುಮಾಲು ಏಕೆ ಸ್ವಾಮಿ. ಅದು ನೀರಿನಲ್ಲಿ ಹೊಡೆದುಕೊಂಡು ಹೋಯಿತು. ಮಹಾರಾಜರನ್ನು ಕೇಳಿ ಒಳ್ಳೇ ಭರ್ಜರಿ ರುಮಾಲು ತೆಗೆದುಕೊಳ್ಳಿ" ಎಂದ. ಸೋಮಪ್ಪ ಆ ಮಾತುಗಳನ್ನು ಕೇಳಿ ವ್ಯಾಕುಲಚಿತ್ತನಾದ. ಇನ್ನೇನೂ ಮಾಡಲಾರದೆ ಅರಮನೆಗೆ ಹೋದ.

ಆತನು ಹೋಗುವ ವೇಳೆಗೆ ಅರಮನೆಯಲ್ಲಿ ಗಲಭೆಯೋ ಗಲಭೆ! ವರನ ಕಡೆಯವರು ಬರುತ್ತಿರುವಾಗ ಹಾದಿಯಲ್ಲಿ ಒಂದು ಹುಲಿ ಬಂದು ಮದುಮಗನನ್ನು ಗಾಯಗೊಳಿಸಿತೆಂದೂ, ಮದುವೆಯ ಗುಂಪು ಚಲ್ಲಾಪಿಲ್ಲಿ ಆಯಿತೆಂದೂ ಜನ ಆಡಿಕೊಳ್ಳುತ್ತಿದ್ದರು. ತನ್ನ ರುಮಾಲು ಕಳೆದುಹೋದ ಪ್ರಯುಕ್ತ ರಾಜನು ಈ ಅವಸ್ಥೆಗೆ ಗುರಿಯಾಗಬೇಕಾಯಿತೆಂದು ಗ್ರಹಿಸಿದ ಸೋಮಪ್ಪ. ಆತನಿಗೆ ತುಂಬಾ ಸಂಕಟವಾಯಿತು. ಹೊಳೆಯ ಹತ್ತಿರಕ್ಕೆ ಧಾವಿಸಿ ನಡೆದ. ಆದರೆ ಆತನು ಅಕಸ್ಮಾತ್ ಎಚ್ಚರತಪ್ಪಿ ಅಲ್ಲಿ ಬಿದ್ದುಬಿಟ್ಟ.

ಹಾಗೆ ಬಿದ್ದುಹೋದ ಸೋಮಪ್ಪನ ಮುಖದಮೇಲೆ ಒಬ್ಬ ಸ್ತ್ರೀ ನೀರು ಚಿಮುಕಿಸಿ ಒಂದು ಹಳೆಯ ರುಮಾಲಿನಿಂದ ಒರೆಸಿ, ಉಪಚಾರ ಮಾಡುತ್ತಿದ್ದಳು. ಸೋಮಪ್ಪನಿಗೆ ಎಚ್ಚರವಾಯಿತು. "ಹಳೆಯದಾದರಾಯಿತು. ಈ ರುಮಾಲು ತಲೆಗೆ ಕಟ್ಟಿಕೊ. ಕಾವು ಕಡಿಮೆಯಾಗುವುದು" ಎಂದಳಾಕೆ. ಸೋಮಪ್ಪ ಸ್ವಲ್ಪ ಚೇತರಿಸಿಕೊಂಡ. ಕೂಡಲೇ ಆಕೆ ತನ್ನ ಅತ್ತಿಗೆ ಎಂದೂ, ಆಕೆಯ ಪಕ್ಕದಲ್ಲಿರುವಾತ ತನ್ನ ಅಣ್ಣನೆಂತಲೂ ಗುರ್ತಿಸಿದ. ಆದರೆ ನಾಚಿಕೆಯಿಂದ ಪುಟ್ಟಪ್ಪ ತನ್ನ ತಮ್ಮನೊಂದಿಗೆ ಮಾತನಾಡಲಿಲ್ಲ.




ಸೋಮಪ್ಪ ಆಕೆಗೆ ಕುಶಲಪ್ರಶ್ನೆ ಹಾಕಲು ಆಕೆ ದಾರಿಯಲ್ಲಿ ತಮಗೆ ಆದ ವಿಪತ್ತನ್ನು ವಿವರಿಸಿ ಹೇಳಿದಳು. ಹಾಗೆ ಮಾತಿನ ಸಂದರ್ಭದಲ್ಲಿ ತನಗೆ ಹೊಳೆಯ ಕಟ್ಟೆಯ ಹತ್ತಿರ ಒಂದು ರುಮಾಲು ಸಿಕ್ಕಿತೆಂದು ಹೇಳಿದಳು. ಸೋಮಪ್ಪ ರುಮಾಲನ್ನು ತಲೆಗೆ ಸುತ್ತಿಕೊಂಡ ಕೂಡಲೇ ಆತನ ಮುಖ ಅರಳಿತು. ಆಗ ಆತನು ಅದು ತನ್ನ ಬಣ್ಣದೆಲೆಯ ರುಮಾಲೇ ಎಂದು ಗ್ರಹಿಸಿದ.

ತನ್ನ ಅಣ್ಣ ಅತ್ತಿಗೆಯರು ಸಕಲವನ್ನೂ ಕಳೆದುಕೊಂಡಿದ್ದಾರೆ. ಹಸಿವು ಬಾಯಾರಿಕೆಗಳಿಂದ ತಳಮಳಿಸುತ್ತಿದ್ದಾರೆ. ಸೋಮಪ್ಪ ಅವರಿಗೆ ನೀರು ತಂದು ಕೊಟ್ಟ. ಅವರಿಗೆ ತಿನ್ನಲು ಏನಾದರೂ ತರೋಣವೆಂದು ನಗರದ ಕಡೆಗೆ ನಡೆದ.

ಅಷ್ಟರಲ್ಲಿ ಒಬ್ಬ ಸೇವಕನು ಓಡುತ್ತಾ ಬಂದು "ಸ್ವಾಮಿ ಮಹಾರಾಜರು ನಿಮ್ಮನ್ನು ಬರಹೇಳಿದರು" ಎಂದು ಅವಸರ ಪಡಿಸಿದ. ತೀರಾ ಅರಮನೆಗೆ ಹೋಗಲು, ಹುಲಿ ಮದುಮಗನನ್ನು ಗಾಯಗೊಳಿಸಲಿಲ್ಲವೆಂತಲೂ, ಒಬ್ಬ ಸೇವಕನನ್ನು ಅದು ಗಾಯಗೊಳಿಸಿತೆಂದೂ ತಿಳಿದು ಬಂತು.

ವರನಕಡೆಯವರು ಪಲ್ಲಕ್ಕಿಗಳಲ್ಲಿ ಬರುತ್ತಿರುವರೆಂದು ವಾರ್ತೆ ಬಂತು. ಎಲ್ಲರೂ ಸಂತೋಷಗೊಂಡರು.

ಸೋಮಪ್ಪನನ್ನು ಕಂಡ ಕೂಡಲೇ ರಾಜನು "ಇಷ್ಟು ಹೊತ್ತೂ ಎಲ್ಲಿಗೆ ಹೋಗಿದ್ದೆ ಸೋಮಪ್ಪಾ" ಎಂದು ಕೇಳಿದ. "ಸ್ನಾನ ಮಾಡಲು ಹೊಳೆಗೆ ಹೋಗಿದ್ದೆ ಪ್ರಭುಗಳೇ"

ಎಂದು ಕಿರುನಗೆ ಬೀರುತ್ತಾ ನುಡಿದ ಸೋಮಪ್ಪ. ರಾಜನಿಗೆ ಅಲ್ಲಿ ತನ್ನ ಅಣ್ಣ ಅತ್ತಿಗೆಯರು ಪಡುತ್ತಿರುವ ಪಾಡನ್ನು ಸಹ ತಿಳಿಸಿದ. ರಾಜನು ಕೂಡಲೇ ಪಲ್ಲಕ್ಕಿಯನ್ನು ಕಳುಹಿಸಿ ಪುಟ್ಟಪ್ಪ ಮತ್ತು ಆತನ ಮಡದಿಯನ್ನು ಕರೆಯಿಸಿಕೊಂಡ.

ರಾಜಕುಮಾರಿಗೆ ವೈಭವದಿಂದ ವಿವಾಹ ನಡೆಯಿತು. ಪುಟ್ಟಪ್ಪ, ಸೋಮಪ್ಪರಿಗೆ ಪ್ರಭುಗಳು ಭಾರೀ ಬಹುಮಾನಗಳನ್ನು ಕೊಟ್ಟರು. ತರುವಾಯ ಅಣ್ಣತಮ್ಮಂದಿರಿಬ್ಬರೂ ಅವರ ಊರಿಗೆ ಪ್ರಯಾಣ ಬೆಳೆಸಿದರು.

ಸೋಮಪ್ಪ ತನ್ನ ಪಾಲಿನ ಬಹುಮಾನಗಳನ್ನು "ಅಣ್ಣಾ ನನಗೆ ಹೆಂಡತಿ ಮಕ್ಕಳು ಇದ್ದಾರೆಯೇ? ಇವುಗಳನ್ನೇನು ಮಾಡಿಕೊಳ್ಳಲಿ?" ಎಂದು ಹೇಳಿ ಪುಟ್ಟಪ್ಪನಿಗೆ ಕೊಟ್ಟುಬಿಟ್ಟ.

ಮತ್ತೆ ಸೋಮಪ್ಪನು ತಮ್ಮ ತಾತಂದಿರ ಕಾಲದ ಜೋಪಡಿಯನ್ನು ಸೇರಿಕೊಂಡು ಸುಖವಾಗಿದ್ದ.

ಹೀಗಿರಲು ಕೆಲವು ದಿನಗಳಾದಮೇಲೆ ಗಿಳಿ ಮತ್ತೆ ಅಲ್ಲಿಗೆ ಬಂದು "ಸೋಮಪ್ಪಾ, ಸೋಮಪ್ಪಾ, ಮಾತನಾಡು. ಬಣ್ಣದ ಎಲೆ ಒಳಿತೋ" ಎಂದು ಕೇಳಿತು. ಅದಕ್ಕೆ ಸೋಮಪ್ಪ "ತೋಟಕ್ಕೆ ಬಣ್ಣದ ಎಲೆ ಒಳಿತು, ಮನೆಗೆ ಮಕ್ಕಳುಮರಿ ಒಳಿತು, ಚಿಂತೆಯಿಲ್ಲದ ಮನೆ ಎಲ್ಲಕ್ಕಿಂತಲೂ ಒಳಿತು" ಎಂದು ಉತ್ತರವಿತ್ತ. ಗಿಳಿ ಸಂತೋಷಗೊಂಡು, ಆತನನ್ನು ಆಶೀರ್ವದಿಸಿ ಹಾರಿಹೋಯಿತು.

ಪುಟ್ಟಪ್ಪನಿಗೆ ಜ್ಞಾನೋದಯವಾಯಿತು. ತನ್ನ ಅತ್ಯಾಶೆ ತನಗೆ ಪಾಠ ಕಲಿಸಿತೆಂದು ಗ್ರಹಿಸಿದ. ತಮ್ಮನನ್ನು ನಿಕೃಷ್ಟ ಭಾವನೆಯಿಂದ ನೋಡಿದುದಕ್ಕೆ ಬಹಳ ನೊಂದುಕೊಂಡ. ಗಿಣಿಯ ಮಾತುಗಳ ಗೂಢಾರ್ಥವನ್ನು ತಿಳಿದು, ತಮ್ಮನನ್ನು ಅಪ್ಪಿಕೊಂಡು ಆದರಿಸಿದ. ಅಂದಿನಿಂದ ಆ ಅಣ್ಣತಮ್ಮಂದಿರಲ್ಲಿ ಭೇದಭಾವವನ್ನಾಗಲೀ, ಮೇಲುಕೀಳೆಂಬ ಭಿನ್ನಭಾವನೆಯನ್ನಾಗಲೀ ಜನ ಕಂಡರಿಯರು. ಅಷ್ಟು ಒಗ್ಗಟ್ಟಾಗಿದ್ದರು.






ಸುಮಾರು ನಾನ್ನೂರೈವತ್ತು ವರ್ಷಗಳ ಹಿಂದೆ ಮೈಸೂರು ಪ್ರಾಂತವನ್ನೆಲ್ಲ ಪುರುಷೋತ್ತಮ ಗಂಗನೆಂಬ ದೊರೆ ಪಾಲಿಸುತ್ತಿದ್ದನು. ಅವನು ಪ್ರಸಿದ್ಧವಾದ ಗಂಗವಂಶಕ್ಕೆ ಸೇರಿದ ದೊರೆ. ಅವನು ಇನ್ನೂ ಮದುವೆಯಾಗಿರಲಿಲ್ಲ.

ಆ ಕಾಲದಲ್ಲಿ ಕಂಚಿಯನ್ನು ಆಳುತ್ತಿದ್ದ ದೊರೆಯ ಮಗಳು ಲೋಕವಿಖ್ಯಾತ ಸುಂದರಿಯೆಂದು ಪ್ರಸಿದ್ಧಳಾಗಿದ್ದಳು. ಪುರುಷೋತ್ತಮನಿಗೆ ಕಂಚಿ ರಾಜಕುಮಾರಿಯೇ ಅನುರೂಪಳಾದ ಕನ್ಯೆಯೆಂದು ಎಲ್ಲರೂ ಅಂದುಕೊಂಡರು. ಪುರುಷೋತ್ತಮನೂ ಕಂಚಿರಾಜನೊಂದಿಗೆ ಸಂಬಂಧವೆಳಸಲು ಮನಸ್ಸು ಮಾಡಿದನು. ತನಗೆ ಆ ಕನ್ಯೆಯನ್ನು ಕೊಡುವಂತೆ ಪ್ರಾರ್ಥಿಸಲು ತನ್ನವರನ್ನು ಸಕಲ ಮರ್ಯಾದೆಗಳ ಸಮೇತ ಕಂಚಿಗೆ ಕಳಿಸಿದನು.

ಅವರು ಕಂಚಿಯನ್ನು ಸೇರಿ ರಾಜನಿಂದ ಗೌರವಿಸಲ್ಪಟ್ಟರು. ಬಳಿಕ ಅವರು ಬಂದ ಕಾರ್ಯವನ್ನು ಕುರಿತು ಪ್ರಸ್ತಾವಿಸಿದರು. ಆ ಪುರುಷೋತ್ತಮ ಗಂಗನ ಶಕ್ತಿ, ಸಾಮರ್ಥ್ಯ, ವಿದ್ಯೆ, ಅಂತಸ್ತು ಐಶ್ವರ್ಯ, ಎಲ್ಲಕ್ಕೂ ಮಿಕ್ಕಿ ವಂಶಗೌರವ ಇವನ್ನೆಲ್ಲಾ ಚೆನ್ನಾಗಿ ಕೇಳಿ ಅರಿತಿದ್ದ ಕಂಚಿದೊರೆಗೆ, ತನ್ನ ಮಗಳಿಗೆ ಆತನು ತಕ್ಕವರನೆಂದು ಒಮ್ಮೆ ಮನಸ್ಸಿಗೆ ತಟ್ಟಿತು. ಆದರೇನು? ಕೇವಲ ಒಂದು ಸಣ್ಣ ವಿಷಯಕ್ಕಾಗಿ ಈ ಸಂಬಂಧವನ್ನು ನಿರಾಕರಿಸಿಬಿಟ್ಟನು. ಅದೇನೆಂದರೆ :

ಗಂಗರಸರು ಜಗನ್ನಾಥದೇವರ ದೊಡ್ಡ ಭಕ್ತರು. ಪುಣ್ಯಕ್ಷೇತ್ರವಾದ ಜಗನಾಥದಲ್ಲಿ ಗಂಗರಾಜರು ದೊಡ್ಡ ದೇವಾಲಯ ಕಟ್ಟಿಸಿದ್ದರು. ಮತ್ತು ಅರಸರೇ ದೇವಾಲಯದ ದೇವರ ಸೇವೆಯನ್ನು ಸ್ವತಃ ಮಾಡುತ್ತಿದ್ದರು. ಹಾಗೆಯೇ ಪುರುಷೋತ್ತಮ ಗಂಗ ಕೂಡ ವರ್ಷಕ್ಕೊಂದು ಬಾರಿ ಉತ್ಸವಕಾಲದಲ್ಲಿ ದೇವರ ಸನ್ನಿಧಿಯಲ್ಲಿ ಕಸಗುಡಿಸಿ ಸಾರಿಸಿ ತನ್ನ ಸೇವೆಯನ್ನು ಸಲಿಸುತ್ತಿದ್ದನು. ಇದನ್ನು ಕೇಳಿ ಅರಿತಿದ್ದ ಕಂಚಿರಾಜನು ಇದೇನು ಹುಚ್ಚು ಎಂದು ಮನಸ್ಸಿನಲ್ಲಿ ಹೀಯಾಳಿಸಿ ಕೊಂಡಿದ್ದನು. ಆದುದರಿಂದ ಈಗ " ಕಸಗುಡಿಸುವ

ಟಿ. ಶ್ರೀನಿವಾಸಯ್ಯ, ಯಳಂದೂರು



ರಾಜನಿಗೆ ನನ್ನ ಪುತ್ರಿಯನ್ನು ಕೊಡಲಾರೆ" ಎಂದು ಖಂಡಿತವಾಗಿ ಹೇಳಿಬಿಟ್ಟನು.

ಪುರುಷೋತ್ತಮ ಗಂಗನ ಕಡೆಯವರು ಖಿನ್ನ ಮನಸ್ಸಿನಿಂದ ಬಂದು ನಡೆದ ಸಂಗತಿಯನ್ನು ನಿವೇದಿಸಿಕೊಂಡರು. ಒಡನೇ ಪುರುಷೋತ್ತಮನು ಕೆರಳಿದ ಹುಲಿಯಾದ! 'ಅವನ ಹೆಮ್ಮೆಗೆ ತಕ್ಕ ಮದ್ದನ್ನರೆಯದೆ ಬಿಡಲಾರೆ' ಎಂದು ಪಣತೊಟ್ಟುಕೊಂಡ.

ಹೀಗೆ ಕೋಪ ತಾಳಿದ ಪುರುಷೋತ್ತಮನು ಕಂಚಿಯನ್ನು ಮುತ್ತಿಗೆ ಹಾಕಲು ಸೇನಾಧಿಕಾರಿಗೆ ಆಜ್ಞೆ ಕೊಟ್ಟ. ಸೇನಾಧಿಪತಿ ದೊಡ್ಡ ಸೇನೆಯನ್ನು ಹೊರಡಿಸಿಕೊಂಡು ಕಂಚಿಯಮೇಲೆ ಸಾಗಿಹೋದ. ಆದರೆ ಕಂಚಿ ರಾಜನು ಮಾತ್ರ ಸಾಮಾನ್ಯನೇ? ಅವನು ಗಂಗರ ಬಲವನ್ನು ಹಿಂದಕ್ಕೋಡಿಸಿಬಿಟ್ಟನು. ಆದರೆ ಪುರುಷೋತ್ತಮಗಂಗನು ಎದೆಗುಂದಲಿಲ್ಲ. ಕೆಲವು ದಿನಗಳನಂತರ ಇನ್ನಷ್ಟು ಹೆಚ್ಚು ಸೈನ್ಯವನ್ನು ಸಾಗಿಸಿಕೊಂಡು ತಾನೇ ಸ್ವತಃ ಹೊರಟನು. ಕಾಳಗವು ಬಲುಕಡಿದಾಗಿ ನಡೆಯಿತು. ಕಡೆಗೆ ಕಂಚಿರಾಜ್ಯವು ಪುರುಷೋತ್ತಮನ ವಶವಾಗಿ ರಾಜನೂ ರಾಜಕುಮಾರಿಯೂ ಅವನಿಗೆ ಸೆರೆಸಿಕ್ಕರು.

ಆದರೆ ಪುರುಷೋತ್ತಮನು ಆ ರಾಜಕುಮಾರಿಯನ್ನು ಮದುವೆ ಮಾಡಿಕೊಳ್ಳಲು ಬಯಸಲಿಲ್ಲ. ಅವಳ ಮುಖವನ್ನುಕೂಡ ನೋಡದೆ ಮಂತ್ರಿಯನ್ನು ಬರಮಾಡಿ ಹೀಗೆಂದು ಆಜ್ಞಾಪಿಸಿದ:

"ಮಂತ್ರಿ, ಇವಳ ತಂದೆ ಕಸಗುಡಿಸುವವನಿಗೆ ಕನ್ಯೆಯನ್ನು ಕೊಡುವುದಿಲ್ಲವೆಂದು ನಮ್ಮನ್ನು ಅವಮಾನಿಸಿದನಲ್ಲವೆ? ಈಗ ಅವನ ಮಗಳನ್ನು—ಲೋಕೈಕಸುಂದರಿಯೆಂದು ವಿಖ್ಯಾತಳಾದ ಈ ಕಂಚಿಕುಮಾರಿಯನ್ನು ಯಾವನಾದರೊಬ್ಬ ಕಸಗುಡಿಸುವವನಿಗೇ ಕೊಟ್ಟು ಮದುವೆ ಮಾಡಿಸಿಬಿಡಿ."

ಪುರುಷೋತ್ತಮನು ಹೀಗೆ ಆಜ್ಞಾಪಿಸುವನೆಂದು ಮಂತ್ರಿ ಯೋಚಿಸಿರಲಿಲ್ಲ. ತನ್ನ ಮದುವೆಗೆ ಏರ್ಪಾಡು ಮಾಡಲು ಹೇಳುವನೆಂದೇ ನಂಬಿದ್ದ.

"ಆಗಲಿ" ಎಂದು ಹೇಳಿ ಮಂತ್ರಿ ಕಂಚಿಕುಮಾರಿಯನ್ನು ತನ್ನೊಂದಿಗೆ ಕರೆದುಕೊಂಡು ಹೋದನು. ಕೋಪಾವಿಷ್ಟನಾದ ಪುರುಷೋ

ತ್ತಮಗಂಗನ ಕೋಪವು ನಂತರ ಮೆಲ್ಲಮೆಲ್ಲನೆ ಶಾಂತವಾಗುತ್ತ ಬಂತು.

ರಾಜಾಜ್ಞೆಯನ್ನೇನೋ ಮಂತ್ರಿ ಒಪ್ಪಿಕೊಂಡಾಯಿತು. ರೋಷಾವೇಶದಲ್ಲಿದ್ದ ರಾಜನ ಮಾತನ್ನು ನಡೆಸಬೇಕೆ? ಕಮಲ ಪುಷ್ಪವು ಕಸದ ಬುಟ್ಟಿಗೆ ಬೀಳಬೇಕೆ? ರತ್ನವನ್ನು ಕೆಸರಗುಂಡಿಗೆ ಎಸೆಯಬೇಕೆ? ರಾಜಕುಲಕ್ಕೆ ಭೂಷಣಳಾದ ರಾಜಕುಮಾರಿಯನ್ನು ಬೀದಿ ಗುಡಿಸುವವನಿಗೆ ಕೊಟ್ಟು ಮದುವೆ ಮಾಡಲು ಮಂತ್ರಿಗೆ ಮನಸ್ಸು ಬರಲಿಲ್ಲ. ಯಾರಿಗೆ ತಾನೇ ಬಂದೀತು? ಮತಿವಂತನೂ ಸ್ವಾಮಿ ಭಕ್ತನೂ ಆದ ಆ ಸುಮಂತ್ರಿ ಕಂಚಿಕುಮಾರಿಯನ್ನು ಗೋಪ್ಯವಾದ ಸ್ಥಳದಲ್ಲಿಡಿಸಿ ತನ್ನ ಮಗಳಂತೆ ಕಾಪಾಡಿದನು. ಅವಳಿಗೆ ಯಾವ ಕೊರತೆಯೂ ಬಾರದಂತೆ ನಂಬಿಗಸ್ಥರಾದ ದಾದಿಯರನ್ನು ನಿಯಮಿಸಿದನು. ರಾಜನಿಗೆ ಈ ವಿಷಯವು ಸ್ವಲ್ಪವೂ ತಿಳಿಯಗೊಡಲಿಲ್ಲ.

"ನಾನು ಹೇಳಿದಂತೆ ಅವಳ ಮದುವೆಯಾಯಿತೆ?" ಎಂದು ಪುರುಷೋತ್ತಮ ಒಂದೆರಡು ಬಾರಿ ಕೇಳಿದಾಗ, "ನಿಮ್ಮಾಜ್ಞೆಗೆ ಭಂಗವಿಲ್ಲ ಪ್ರಭುವೆ" ಎಂದು ಉಪಾಯವಾಗಿ ಉತ್ತರ ಹೇಳಿ ತಪ್ಪಿಸಿಕೊಂಡ. ಕ್ರಮೇಣ ರಾಜ್ಯಾಡಳಿತದಲ್ಲಿ ಮನಸ್ಸನ್ನು ತಿರುಗಿಸಿದ ಪುರುಷೋತ್ತಮನು ಕಂಚಿಕುಮಾರಿಯ ವಿಚಾರವನ್ನೇ ಮರೆತುಬಿಟ್ಟ. ಅವನಿಗೆ ಆ ವಿಚಾರದ ನೆನಪೂ ಬಾರದಂತೆ ಮಂತ್ರಿ ಬೇರೆ ಬೇರೆ ವಿಷಯಗಳ ಕಡೆಗೆ ತಿರುಗಿಸುತ್ತಿದ್ದ.




ಹೀಗೆಯೇ ಆರೇಳು ತಿಂಗಳು ಕಳೆದು ಹೋಯಿತು. ಪ್ರಸಿದ್ಧವಾದ ಜಗನ್ನಾಥದೇವರ ಉತ್ಸವಕಾಲವು ಬಂದಿತು. ಪುರುಷೋತ್ತಮನು ತನ್ನ ವಂಶ ಪಾರಂಪರ್ಯವಾಗಿ ಬಂದ ಸ್ವಾಮಿಯ ಸೇವೆಗಾಗಿ ಎಲ್ಲಾ ಸಿದ್ಧತೆಗಳನ್ನೂ ಮಾಡಿದನು. ನಂತರ ದೇವಸೇವೆಗೆ ದೀಕ್ಷಿತವಾಗಿ ಮಂತ್ರಿ ಪರಿವಾರಗಳೊಂದಿಗೆ ದೇವಾಲಯದ ಕಡೆಗೆ ಹೊರಟನು. ದೇವಾಲಯದ ಕೆರೆಯಲ್ಲಿ ಮಿಂದು ಶುಚಿರ್ಭೂತನಾಗಿ ದಿವ್ಯ ವಸ್ತ್ರಾಲಂಕಾರಗಳಿಂದ ಸ್ವಾಮಿಯ ಸನ್ನಿಧಿಯನ್ನು ಸೇರಿದನು. ಅಲ್ಲಿ ನವರತ್ನ ಖಚಿತವಾದ ಬಂಗಾರದ ಹಿಡಿಕೆಯುಳ್ಳ ಕಸಬರಿಕೆಯನ್ನು ಪುರುಷೋತ್ತಮ ಗಂಗನಿಗೆ ಒಪ್ಪಿಸಲ್ಪಟ್ಟಿತು. ರಾಜನು ದೇವರನ್ನೆ ಸ್ಮರಿಸುತ್ತಾ

ದೇವಾಲಯದ ಅಂಕಣವನ್ನು ಗುಡಿಸಲು ತೊಡಗಿದನು. ಬ್ರಾಹ್ಮಣರು ಮಂತ್ರಘೋಷ ಮಾಡುತ್ತಿದ್ದರು. ಅರಸನು ಅಕ್ಕಪಕ್ಕಗಳನ್ನು ನೋಡದೆಯೇ ತನ್ನ ಕೆಲಸಮಾಡುತ್ತಿದ್ದನು.

ಆಗ, ಮಂತ್ರಿ ಯಾರಿಗೂ ಗೊತ್ತಾಗದಂತೆ ಮರೆಯಲ್ಲಿರಿಸಿದ್ದ ಸರ್ವಾಲಂಕಾರ ಭೂಷಿತೆಯಾದ ಕಂಚಿ ರಾಜಕುಮಾರಿಯನ್ನು ಕರೆದು ತಂದು ರಾಜನಿದಿರು ನಿಲ್ಲಿಸಿದನು. ಕೈಯಲ್ಲಿ ವರಮಾಲಿಕೆಯನ್ನು ಹಿಡಿದುಕೊಂಡು ನಿಂತಿದ್ದ ಪರಮ ಸುಂದರಿಯಾದ ಕಂಚಿಕುಮಾರಿಯನ್ನು ನೋಡಿದ ಪುರುಷೋತ್ತಮಗಂಗ. ಆಗ ಮಂತ್ರಿ ರಾಜನನ್ನು ಕುರಿತು—"ಪ್ರಭು, ತಮ್ಮ ಆಜ್ಞೆಯನ್ನು ಶಿರಸಾವಹಿಸಿ ನೆರವೇರಿಸಿ ನನ್ನ ಕರ್ತವ್ಯ ಕೊನೆ ಗಾಣಿಸಿದ್ದೇನೆ—ಈ ಕಂಚಿ ರಾಜಕುಮಾರಿಗೆ ಜಗನ್ನಾಥದೇವರ ಪಾದಧೂಳಿಯನ್ನು ಸೇವಿಸುವ ರಾಜನಿಗಿಂತಲೂ ಯೋಗ್ಯವರನು ನನಗೆ ತೋರಲಿಲ್ಲ. ಚಿತ್ತಯಿಸಬೇಕು" ಎಂದು ಬಿನ್ನವಿಸಿಕೊಂಡ.

ಕೂಡಲೇ ಪುರುಷೋತ್ತಮನಿಗೆ ಎಲ್ಲವೂ ಸ್ಮರಣೆಗೆ ಬಂದಿತು. ಆಶ್ಚರ್ಯವಾಯಿತು. ಮಂತ್ರಿಯ ಬುದ್ಧಿವಂತಿಗೆಯನ್ನು ಒಳಗೊಳಗೇ ಮೆಚ್ಚಿಕೊಂಡನು. ತಾನು ಮೊತ್ತ ಮೊದಲು ಯಾವ ಕನ್ಯೆಗಾಗಿ ಪ್ರಯತ್ನ ಮಾಡಿದ್ದನೋ ಈಗ ಅದೇ ಚೆಲುವೆಯನ್ನು ವರಿಸಿಕೊಳ್ಳಲು ತನ್ನ ಮಾತಿನಿಂದ ತಾನೇ ಕಟ್ಟುಬಿದ್ದಿದ್ದಾನೆ. ಈಗ ಅವನಿಗೇನೂ ಸಿಟ್ಟಿಲ್ಲ. ಸಂತೋಷದಿಂದ ಮದುವೆಗೆ ತನ್ನ ಒಪ್ಪಿಗೆಯನ್ನು ಕೊಟ್ಟನು.

ಇದನ್ನು ನೋಡಿ ರಾಜಪರಿವಾರದವರಿಗೂ ಪ್ರಜೆಗಳಿಗೂ ಬಹಳ ಸಂತೋಷವಾಯಿತು. ಮದುವೆಗೆ ಬೇಕಾದ ಮುಂದಿನ ಏರ್ಪಾಡುಗಳನ್ನೆಲ್ಲಾ ಮಂತ್ರಿ ಬೇಗಬೇಗನೆ ಮಾಡಿದನು. ಕಂಚಿರಾಜನು ಬಂಧವಿಮುಕ್ತನಾಗಿ ಅವನೂ ಈ ಸಂತೋಷದಲ್ಲಿ ಭಾಗವಹಿಸಿದನು. ಈಗ ಅವನ ಹೆಮ್ಮೆಯೆಲ್ಲಾ ಕರಗಿ ಹೋಗಿತ್ತು. ಅವನು ಮನಃಪೂರ್ವಕವಾಗಿಯೇ ಈ ಮದುವೆಗೆ ಒಡಂಬಟ್ಟನು. ಒಂದು ಶುಭಮುಹೂರ್ತದಲ್ಲಿ ಪುರುಷೋತ್ತಮಗಂಗನಿಗೆ ಕಂಚಿಕುಮಾರಿಯೊಂದಿಗೆ ವಿವಾಹವು ನೆರವೇರಿತು.



# ಮೂವರು ಗೆಳೆಯರು (ಹಿಂಬದಿಯ ಚಿತ್ರ)

ತೀರಾ ನೋಡಿದರೆ ಬಂದದ್ದು ಮತ್ತಾರೂ ಅಲ್ಲ, ಕೊರಪಣ್ಣನ ತಾಯಿಯೆ!

"ಬಾಗಿಲು ತೆರೆಯೋ ಮಗು!" ಎಂದಳುತಾಯಿ. ಕೊರಪಣ್ಣ ಸಂದೇಹ ದಿಂದ ಬಾಗಿಲ ಸಂದಿನಿಂದ ನೋಡಿದ. ಮೆಲ್ಲಗೆ "ಕೊರಪಣ್ಣ ಗೆಳೆಯರೊಂದಿಗೆ ಆಡುತ್ತಿದ್ದಾನಮ್ಮ" ಎಂದ.

"ಗೆಳೆಯರು ಗೆಳೆಯರು ಅನ್ನುತ್ತೀ. ಅವರು ಒಳ್ಳೇವರೇನಾ?" ಎಂದು ಕೇಳಿ ದಳು ತಾಯಿ. "ಓ ಬಹಳ ಒಳ್ಳೇವರೇ" ಎಂದ.

"ಹಾಗಲ್ಲೋ ಮಗು. ಅಡವಿಯಲ್ಲಿದ್ದವರೆಲ್ಲಾ ನಮಗೆ ಗುರುತಿನವರಾದರೂ ಅವರಲ್ಲಿ ಒಳ್ಳೇವರು ಸ್ವಲ್ಪಮಂದಿ ಮಾತ್ರ. ಅಂತವರಾರಿಲ್ಲಷ್ಟೆ?" ಎಂದಳು ತಾಯಿ. "ಇಲ್ಲಮ್ಮಾ" ಅಂದ ಕೊರಪಣ್ಣ ನಗುತ್ತ. "ಹಾಳು ಹುಲಿಯೋ, ಚಿರತೆಯೋ, ಹಗೆ ಹಿಡಿಯುವ ಹಾವೋ ಇಲ್ಲಷ್ಟೇ?" ಎಂದು ಮತ್ತೂ ಕೇಳಿದಳು ತಾಯಿ. "ಇಲ್ಲಮ್ಮಾ. ರಾಗದ ಕೋಗಿಲೇನೂ, ಬಣ್ಣಬಣ್ಣದ ಗಿಳೀನೂ, ಆಡುವ ಕೋತಿನೂ ಕೂಡಿಕೊಂಡಿದ್ದೇನೆ" ಎಂದ ಕೊರಪಣ್ಣ.

ತಾಯಿ ಸಮಾಧಾನದಿಂದ ಮತ್ತೆಲ್ಲಿಗೋ ಹೋದಳು.

ಕೊರಪಣ್ಣ ತನ್ನ ಗೆಳೆಯರನ್ನು ಕೂತುಕೊಳ್ಳಿಸಿ ಆಟವಾಡೋಣವೆಂದು ಮಾಡಿದ. ಆದರೆ ಕೋತಿ ಕುಳಿತಲ್ಲಿ ಕುಳಿತರೆ ತಾನೆ? ಎಷ್ಟು ಹೇಳಿದರೂ ಕೋತಿಗೆ ಚಪಲಬುದ್ಧಿ ಹೋಗಲಿಲ್ಲ. ಅದಕ್ಕೆ ಒಂದೇ ಕಡೆ ಸುಮ್ಮನೆ ಕೂತು ಆಟ ಆಡಲು ಗೊತ್ತೇ ಇಲ್ಲ. ಒಳಗೆ ಅತ್ತಿತ್ತ ಓಡಾಡಿತು. ಚಂಗಚಂಗನೆ ಹಾರಿತು. ನೆಲುವಿನ ಮೇಲೆ ಎಗರಿತು ಹಾಲು ಮಜ್ಜಿಗೆ ಉರುಳಿಸಿತು. ಪಾತ್ರ ಪಡದೆಗಳು ಅತ್ತಿತ್ತ ಹೊರ ಳಾಡಿದುವು. ಎಲ್ಲಾ ಚೆಲ್ಲಾಪಿಲ್ಲೀ ಮಾಡುತ್ತ ಕುಣಿದಾಡುತಿತ್ತು.

ಕೋತಿಯ ಚೇಷ್ಟೆಗಳಿಗೆ ಕೊರಪಣ್ಣ ತುಂಬಾ ಹೆದರಿದ. ಅವನ ಅಮ್ಮ ಅಪ್ಪ ನೋಡಿದರೆ ಏನು ಮಾಡುವರೋ ಎಂದು ಭಯ. "ಕೋತೀ, ಇದೆಲ್ಲಾ ಮನೆಯೊ ಳಗೆ ಆಡುವ ಆಟವಲ್ಲ" ಎಂದು ಎಷ್ಟೋ ಹೇಳಿ ನೋಡಿದ. ಕೇಳಲೇ ಇಲ್ಲ ಆ ಕೋತಿ.

ಅಷ್ಟರಲ್ಲಿ ಹೊರಗೆ ಮರಗಳ ಮೇಲೆ ಅನೇಕ ಕೋತಿಗಳ ಕಿಚಕಿಚ ಶಬ್ದವು ಕೇಳಿತು. ಒಡನೆಯೇ ಈ ಕೋತಿ ಕೊರಪಣ್ಣ ತನ್ನ ಹೊಸ ಗೆಳೆಯನೆಂಬ ನೆನಪು ಸಹಾ ಮರೆತು ಹೋಯಿತು. "ಓ! ನಮ್ಮವರು ಎಲ್ಲಿಗೋ ಹೋಗುತ್ತಿದ್ದಾರೆ. ನೋಡಬೇಕು" ಎನ್ನುತ್ತಾ ಗಭಾಲನೆ ಗುಡಿಸಲಿನೊಳಗಿನಿಂದ ಹೊರಗೆ ಹಾರಿ ತನ್ನ ಗುಂಪಿನೊಂದಿಗೆ ಕಲೆತು ಓಡಿಯೇ ಹೋಯಿತು! ಆಗ ಗುಡಿಸಲಿನೊಳಗೋ......?

# ಕಿರಿ ಬರಹದ ಮೇಲಾಟ

## " ಶಾಲೆಯಲ್ಲಿ ನನ್ನ ತಂಟೆ "

ತಂಟೆ ಎಂದರೆ ಸಾಮಾನ್ಯವಾಗಿ ಕೆಟ್ಟ ಕೆಲಸವೆಂದುಕೊಳ್ಳುತ್ತಾರೆ ಬಹಳಮಂದಿ. ನಿಜವಾಗಿ ಹಾಗಿಲ್ಲ. ತಂಟೆಯೆಂಬುದು ಹುಡುಗ ಹುಡುಗಿಯರ ಚುರುಕುತನದ ಉತ್ಸಾಹದ ಅಲಂಕಾರವಾಗಿದೆ. ಸಣ್ಣ ಮಕ್ಕಳು ಮಾಡುವ ತಂಟೆಗಳಲ್ಲಿ ಅವರ ಯೋಚನೆಯೂ ಕಲ್ಪನೆಯೂ ಯುಕ್ತಿಯೂ ತುಂಬಿರುತ್ತವೆ. ಅವರು ಮಾಡುವ ತಂಟೆ ದೊಡ್ಡವರಿಗೆ ಮಾಡಲು ಸಾಧ್ಯವಾಗುವುದಿಲ್ಲ. ಒಂದು ವೇಳೆ ದೊಡ್ಡವರು ಮಾಡಿದರೂ ಅಸಹಜವೆನಿಸುತ್ತೆ. ಆದರೆ,

ಮಿತಿಮಿಂಚಿದರೆ ಎಲ್ಲವೂ ಕಹಿಯೇ. ಮಿತಿಯೊಳಗೆ ಮಾಡುವ ಮಕ್ಕಳ ತಂಟೆಗಳು ಮುದ್ದುಮುದ್ದಾಗಿರುತ್ತವೆ. ಈ ತಂಟೆಗಳು ಶಾಲೆಯಲ್ಲಿ ಮನೆಯಲ್ಲಿ ಆಟದ ಸ್ಥಳದಲ್ಲಿ ಬಗೆಬಗೆಯಾಗಿರುತ್ತವೆ; ರುಚಿಯೂ ಬಗೆಬಗೆ.

ಈಗ ನೀವು ಶಾಲೆಯುಲ್ಲಿ ಮಾಡಿದ ಒಂದು ತಂಟೆಯನ್ನು ಕುರಿತು, ' ಶಾಲೆಯಲ್ಲಿ ನನ್ನ ತಂಟೆ ' ಎಂಬ ಶೀರ್ಷಿಕೆಯುಲ್ಲಿ 'ಚಂದಮಾಮ 'ನ ಒಂದು ಪುಟಕ್ಕೆ ಸರಿಹೋಗುವಂತೆ ಇದ್ದುದಿದ್ದ ಹಾಗೆಯೇ ಬರೆದು ಕಳುಹಿಸಿರಿ. ಕವರಿನ ಮೇಲೆ ' **ಕಿರಿಬರಹದ ಮೇಲಾಟ, ಚಂದಮಾಮ, ಮದರಾಸು-26** ' ಎಂದು ಬರೆಯಬೇಕು. ಇದು ಫಿಬ್ರವರಿ 8 ನೇ ತಾರೀಖಿನೊಳಗೆ ನಮಗೆ ಸೇರಬೇಕು. ಯೋಗ್ಯವಿದ್ದುದನ್ನು ಪ್ರಕಟಿಸುತ್ತೇವೆ. ಇದಕ್ಕೆ ಬಹುಮಾನ ವುಂಟು.

---

## ಟೈಪು ಚಿತ್ರ



ಎಂ. ಬಿ. ಪ್ರಸಾದರಾವು - ಗುಂಟೂರು

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ 10 ರೂ.

1954 ಏಪ್ರಿಲ್ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ:





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟು ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಫಿಬ್ರವರಿ 10 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸುವುದಿಲ್ಲ.
ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು–26.

---

### ಮಾರ್ಚಿ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ : ಆರೋಹಣ ಸಾಧನ

ಎರಡನೇ ಫೋಟೋ : ಆತ್ಮೋನ್ನತಿ ಸಾಧನ

ಕಳಿಸಿದವರು: ಎಚ್. ಎಸ್. ಶ್ರೀನಿವಾಸ ಸೆಟ್ಟಿ, C/o ಪದ್ಮನಾಭ ಸ್ಟೋರ್ಸ್, ಅರಸೀಕೆರೆ, ಮೈಸೂರು ಸ್ಟೇಟ್.

ಬಹುಮತಿ ರೂ. 10/– ನ್ನು ಮಾರ್ಚಿ ಸಂಚಿಕೆ ಹೊರಟ ಕೂಡಲೇ ಕಳುಹಿಸಲ್ಪಡುತ್ತದೆ.









ನಿರ್ಮಾಪಕರು....ನಾಗಿರೆಡ್ಡಿ & ಚಕ್ರಪಾಣಿ

Printed by B. NAGI REDDI at the B. N. K. Press Ltd., Madras 26, and Published by him for Chandamama Publications, Madras 26, Controlling Editor : SRI 'CHAKRAPANI'

Photo by N. Thyagarajan



ಬಹುಮಾನ
ಪಡೆದ ಶೀರ್ಷಿಕೆ

ನೀರೇ ಸಾಲದು

ಕಳಿಸಿದವರು:
ಯಂ. ಸುವರ್ಣಮ್ಮ, ಮೈಸೂರು

